# ಪುಸ್ತಕಮನೆ

ಓದು, ಬರಹ, ಬಲ್ಲವರ ಪುಸ್ತಿಕೆ

- ನಿಜವಾಗಿಯೂ ರಾಜಕಾರಣಿಗಳು ಯಾರು?
- ಸಮಕಾಲೀನತೆಯ ಆತಂಕಗಳು
- ಚಲನಶೀಲತೆಯ ಹೊಸದಿಕ್ಕುಗಳತ್ತ
- ಸಮುದಾಯ ಎಚ್ಚರಿಸುವ ಸಾಹಿತ್ಯ
- ಕಿರುಗವನಗಳು - ಒಂದು ಟಿಪ್ಪಣಿ
- ಅನೂಹ್ಯ ಚೇತನ - ಸತ್ಯನಾರಾಯಣ ಮುಜುಮದಾರ
- ಹೈಟೆಕ್ ಯುಗಕ್ಕೆ 'ಕನಕ ಮುಸುಕು'

ಸಂಪಾದಕ
ಹರಿಹರಪ್ರಿಯ

ಖಾಸಗಿ ಪ್ರಸಾರಕ್ಕಾಗಿ ಮಾತ್ರ

೨ನೇ ವರುಷದ ೭ನೇ ಪುಸ್ತಿಕೆ

ಮಾರ್ಚ್ ೨೦೦೮

# ಪುಸ್ತಕಮನೆ

ಓದು, ಬರಹ, ಬಲ್ಲವರ ಪುಸ್ತಿಕೆ

ಬೆಲೆ : ಒಟ್ಟು 24 ಪುಸ್ತಿಕೆಗಳಿಗೆ ರೂ. 500/- (ಅಂಚೆ ವೆಚ್ಚ ಸೇರಿ)
ಬಿಡಿ ಪುಸ್ತಿಕೆಗೆ ರೂ. 20/- (ಅಂಚೆ ವೆಚ್ಚ ಸೇರಿ ರೂ. 25/-)

*ಬೆಂಗಳೂರಿನ ಹೊರಗಿನವರು ಹಣವನ್ನು ಎಂ. ಓ./ಡಿ. ಡಿ. ಗಳಲ್ಲಿ ಮಾತ್ರ ಕಳಿಸಿಕೊಡಬೇಕಾಗಿ ವಿನಂತಿ*

---

ಒಳಪುಟಗಳಲ್ಲಿ.....

೧. ನಿಜವಾಗಿಯೂ ರಾಜಕಾರಣಿಗಳು ಯಾರು? ...ಸಂಪಾದಕ .... ೩

೨. ಸಮಕಾಲೀನತೆಯ ಆತಂಕಗಳು ... ಜಿ. ಎಸ್. ಶಿವರುದ್ರಪ್ಪ .... ೬

೩. ಚಲನಶೀಲತೆಯ ಹೊಸದಿಕ್ಕುಗಳತ್ತ ...ಕಿ. ರಂ. ನಾಗರಾಜ .... ೧೨

೪. ಸಮುದಾಯ ಎಚ್ಚರಿಸುವ ಸಾಹಿತ್ಯ ... ಪಂಡಿತ ತಾರಾನಾಥ .... ೨೦

೫. ಕಿರುಗವನಗಳು – ಒಂದು ಟಿಪ್ಪಣಿ ... ಈರಪ್ಪ ಎಂ. ಕಂಬಳಿ .... ೨೫

೬. ಅನೂಹ್ಯ ಚೇತನ – ಸತ್ಯನಾರಾಯಣ ಮುಜುಮದಾರ ...ಮಲ್ಲೇಶಪ್ಪ ಸಿದ್ರಾಂಪೂರ .... ೨೮

೭. ಹೈಟೆಕ್ ಯುಗಕ್ಕೆ 'ಕನಕ ಮುಸುಕು' ... ಬಿ. ಎಸ್. ಚಂದ್ರಶೇಖರ್ .... ೩೩

---

ಸಂಪಾದಕ ಪ್ರಕಾಶಕ ಮುದ್ರಕ : ಪುಸ್ತಕಮನೆ ಹರಿಹರಪ್ರಿಯ
702, ಬಿ.ಸಿ.ಸಿ.ಹೆಚ್.ಎಸ್. ಲೇಔಟ್, ವಾಜರಹಳ್ಳಿ, ತಲಘಟ್ಟಪುರ, ಬೆಂಗಳೂರು – 560 062
ಮೊಬೈಲ್ : 9845867184 / 9242221506
e-mail : hariharapriya@gmail.com pustakamane@yahoo.com

ಮುದ್ರಣ : ಶ್ರೀರಾಮ ಪ್ರಿಂಟರ್ಸ್
ನಂ. 1, ಎಸ್.ಜಿ.ಎಸ್. ಕಾಂಪ್ಲೆಕ್ಸ್, ಚುಂಚಘಟ್ಟ ಮುಖ್ಯರಸ್ತೆ, ಕೋಣನಕುಂಟೆ, ಶ್ರೀನಿಧಿ ಶ್ರೀನಿವಾಸ ದೇವಸ್ಥಾನದ ಹತ್ತಿರ, ಬೆಂಗಳೂರು – 560 062
ಮೊಬೈಲ್ : 9845346197

೧

# ನಿಜವಾಗಿಯೂ ರಾಜಕಾರಣಿಗಳು ಯಾರು ?

**ಸಂಪಾದಕ**

ಪುಣ್ಯಾತ್ಮ ಕೆಂಗಲ್ ಹನುಮಂತಯ್ಯ ಅವರು 'ಸರ್ಕಾರದ ಕೆಲಸ ದೇವರ ಕೆಲಸ' ಎಂದು ವಿಧಾನಸೌಧ ಎಂಬ ಕರ್ನಾಟಕದ ಆಡಳಿತದ ಕೊಳಗೇರಿಗೆ ಫಲಕ ಕೆತ್ತಿ(ಸಿ)ದರು. ಆದರೆ ಹನುಮಂತಯ್ಯ ಅವರ ಹಣೇಬರಹಕ್ಕೆ ಸ್ಥಾನವೂ ಹೋಯಿತು. ಫಲಕವೂ ಹೋಯಿತು. ಮಾನವೂ ಹೋಯಿತು. ಡುಂ ಡುಂ ಡುಂ. ಇದೇ ಕರ್ನಾಟಕದ ಹಿರಿಮೆ.

ಈಗ ನಮ್ಮ ಕಣ್ಣ ಎದುರಿಗೆ ಸರ್ಕಾರವೂ ಇಲ್ಲ. ದೇವರು ಇರುವುದಕ್ಕೆ ಯಾವ ಋಜುವಾತೂ ಸಿಕ್ಕಿಲ್ಲ. ಆದರೂ ಉರುಳಿಹೋದ ಸರ್ಕಾರ, ಜಾತಿ ಆಧಾರದ ಮೇಲೆ ನೇಮಿಸಿದ ಇಲಾಖೆಗಳು, ಅಕಾಡಮಿಗಳು ಸರ್ಕಾರವೇ ತಾವಾಗಿ, ತಾವೇ ದೇವರಾಗಿ ಮೆರೆಯುತ್ತಿವೆ, ಮಿಂಚುತ್ತಿವೆ ಎಂಬುದಕ್ಕೆ ಒಂದು ಸಣ್ಣ, ಅತೀ ಸಣ್ಣ ಉದಾಹರಣೆಯಾಗಿ ಕನ್ನಡ ಪುಸ್ತಕ ಪ್ರಾಧಿಕಾರ ಎಂಬ ಮೂರ್ಖರ ಕೂಟದ ಕಾರ್ಯ ವೈಖರಿ ಕಂಡು, ಮುಂದೆ ಹೋಗೋಣ.

ದಿನಾಂಕ ೧೪-೧೧-೨೦೦೭ರಂದು ಮೊಟ್ಟ ಮೊದಲಿಗೆ ಪ್ರಾಧಿಕಾರದ ಅಧ್ಯಕ್ಷರ ತವರೂರಾದ ತುಮಕೂರಿನಲ್ಲಿ 'ಸಿರಿಗನ್ನಡ ಪುಸ್ತಕಮನೆ' ಎಂಬ ಹೆಸರಿನಲ್ಲಿ ಪುಸ್ತಕ ಮಾರಾಟ ಮಳಿಗೆಯ ಉದ್ಘಾಟನೆ ನಡೆಯಿತು. ಎರಡನೆಯದಾಗಿ ಈ ವರ್ಷವೇ ಬೆಂಗಳೂರಿನಲ್ಲಿ, ರವೀಂದ್ರ ಕಲಾಕ್ಷೇತ್ರದ ಹಿಂಭಾಗದಲ್ಲಿ ಸಿರಿಗನ್ನಡವನ್ನು ಏಕೆಂದು ಕಿತ್ತು ಹಾಕಿ, ಕೇವಲ 'ಪುಸ್ತಕಮನೆ' ಎಂಬ ತಗಡಿನ ರಂಗುರಂಗಿನ ಫಲಕವನ್ನು ಕಟ್ಟಡದ ಮೇಲೆ ತಗಲು ಹಾಕಲಾಯಿತು. ಆದರೆ ಕಟ್ಟಡದ ಶಿಲಾಫಲಕದಲ್ಲಿ ಮಾತ್ರ, ಪುಸ್ತಕ ಮಾರಾಟ ಮಳಿಗೆ ಎಂದೇ ಕೆತ್ತಿಸಲಾಗಿದೆ. ಸರ್ಕಾರದ ಕೆಲಸವೇ ಬೇರೆ, ದೇವರ ಕೆಲಸವೇ ಬೇರೆ ಅಲ್ಲವೆ ?

ಸಂಬಂಧ ಪಟ್ಟ ಅಧಿಕಾರಿಗಳನ್ನು ವಿಚಾರಿಸಿದರೆ ; ಈ ಸಿರಿಗನ್ನಡ, ಕೇವಲ ಪುಸ್ತಕಮನೆ, ಪುಸ್ತಕ ಮಾರಾಟ ಮಳಿಗೆ - ಎಂಬ ನಾಮಾಂತರದ ಅವಾಂತರಕ್ಕೆ ಕಾರಣರಾದ ಪುರುಷರು, ಸ್ತ್ರೀಯರು ಯಾರೆಂದು ಈವರೆಗೂ ಗೊತ್ತಾಗಲಿಲ್ಲ.

ಇಲ್ಲಿಯ ಪ್ರಶ್ನೆ ಅದಲ್ಲ.

ಮಾರಾಟ ಮಳಿಗೆ ಮನೆ ಹೇಗಾಗುತ್ತದೆ ? ಪುಸ್ತಕ ಪ್ರಾಧಿಕಾರ, ಕನ್ನಡ ಪುಸ್ತಕ ಪ್ರಾಧಿಕಾರ. ಸಿರಿಗನ್ನಡ ಪುಸ್ತಕ ಪ್ರಾಧಿಕಾರ, ತುಮಕೂರಿನ ಪ್ರಾಧಿಕಾರ, ಬೆಂಗಳೂರಿನ ಪ್ರಾಧಿಕಾರ - ಎಂದೇ ನಾಮಕರಣ ಮಾಡಬಹುದಿತ್ತಲ್ಲ! ಕಣ್ಣೆದುರಿಗೆ, ತಾವೇ ಪ್ರಕಟಿಸಿದ ಬೃಹತ್ ಗ್ರಂಥದಲ್ಲಿ ಪುಸ್ತಕಮನೆ ಹರಿಹರಪ್ರಿಯ ಎಂಬ ಜನಜನಿತ ಹೆಸರು ಸ್ವೀಕರಿಸಿ, ಪ್ರಾಧಿಕಾರದ ಅಧ್ಯಕ್ಷರೇ ಚಂದಾದಾರರೂ ಆಗಿರುವ ಪತ್ರಿಕೆಯಲ್ಲಿ ಹೆಸರು 'ಪುಸ್ತಕಮನೆ' ರಾರಾಜಿಸುತ್ತಿದ್ದೂ - ಅದನ್ನೇ ಅನಾಮತ್ ಎತ್ತಿ ಹಾಕಿಕೊಳ್ಳುವ ಘನ ಉದ್ದೇಶವಾದರೂ ಏನಾಗಿರಬಹುದು ? ಇಲ್ಲದ ಯಾವ ಸರ್ಕಾರ, ದೇವರು ಬಂದು ವಕ್ಕರಿಸಿಕೊಂಡು ಈ ಎಲ್ಲಾ ಆಟ ಆಡಿಸಿದ್ದೋ?

ಹಾಗೆ ನೋಡಿದರೆ : ಕನ್ನಡ ಪುಸ್ತಕ ಪ್ರಾಧಿಕಾರ ಕರ್ನಾಟಕದ ನೆಲದಲ್ಲಿ ಜನ್ಮ ತಾಳುವ ಮುಂಚೆಯೇ, ಬೆಂಗಳೂರಿನ ರಾಜಾಜಿನಗರದ ಕೇತಮಾರನಹಳ್ಳಿಯ ಜನಸಾಮಾನ್ಯರು ''ಪುಸ್ತಕಮನೆ''ಯ ನಾಮಕರಣಕ್ಕೆ ಕಾರಣರಾಗಿ, ನಾಡಿನಾದ್ಯಂತ ಸಾಂಸ್ಕೃತಿಕ ಪ್ರಿಯರ ಮನೆಮಾತಾಗಿ ಹೋಯಿತು. ಪ್ರಾಧಿಕಾರ ರಚನೆಯಾದರೂ, 'ಪುಸ್ತಕಮನೆ', ಅನುದಿನವೂ ಪುಸ್ತಕ ಪ್ರದರ್ಶನ, ಸಾಂಸ್ಕೃತಿಕ ಕಾರ್ಯಕ್ರಮ, ವಿಚಾರಗೋಷ್ಠಿಗಳು ನಡೆದೇ ಇದ್ದವು. ಆಗ ಈಗಿನ ಪುಸ್ತಕ ಪ್ರಾಧಿಕಾರದ ಅಧ್ಯಕ್ಷ , ಸದಸ್ಯನೊಬ್ಬ ಬರೆದ ಪತ್ರಗಳು 'ಪುಸ್ತಕಮನೆ'ಯ ಭಂಡಾರದಲ್ಲಿದ್ದ, ಸದ್ಯದಲ್ಲೇ ಪ್ರಕಟಕೂಡ ಆಗಲಿವೆ. ಹೀಗೆ ಪತ್ರ ಬರೆದವರು, ಮನೆಗೇ ಬಂದು ನೋಡಿ ಹಾಡಿಹೊಗಳಿದವರು, ಪುಟ ಪುಟ ಬರೆದವರು - ಸಾವಿರಾರು ಮಂದಿ. ಅವರೆಲ್ಲ ಸರದಿಯ ಪ್ರಕಾರ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರೂ, ಸದಸ್ಯರೂ ಆಗುತ್ತಿರುವುದು ಈ ಲೋಕದ ಮಹಿಮೆ.

ಇನ್ನು ಆ ಐದು ವರ್ಷಗಳು ಪ್ರತೀದಿನ ನಾಡಿನ ಎಲ್ಲ ಪತ್ರಿಕೆಗಳಲ್ಲಿ 'ಪುಸ್ತಕಮನೆ' ಕಾರ್ಯಕ್ರಮದ ವಿವರ ಪ್ರಕಟವಾಗುತ್ತಲೇ ಇತ್ತು. ಜನಸಾಮಾನ್ಯರು, ವಿದ್ಯಾರ್ಥಿಗಳು, ಪುಸ್ತಕಪ್ರಿಯರು ಮಾತ್ರವೇ ಅಲ್ಲ, ವಿಶ್ವವಿದ್ಯಾಲಯಗಳ, ಕಾಲೇಜುಗಳ, ಸಾರ್ವಜನಿಕ ಗ್ರಂಥಾಲಯಗಳ ಅಧ್ಯಾಪಕರು, ಸಂಶೋಧಕರು, ಗ್ರಂಥಪಾಲಕರು ದಿನವೂ 'ಪುಸ್ತಕಮನೆ'ಗೆ ಬರುತ್ತಲೇ ಇದ್ದರು. ಊಟ, ತಿಂಡಿಯ ಸೇವೆಕೂಡ ಈ ಬಡ ಬ್ರಾಹ್ಮಣರ ಮನೆಯಲ್ಲಿ ನಡೆಯುತ್ತಿತ್ತು ಎಂದು ನಾಚಿಕೆಬಿಟ್ಟು ಹೇಳಿಕೊಳ್ಳಬೇಕಾಗಿದೆ. ಅದು ತಾಯಿ ತಂದೆಯ ಪುಣ್ಯ. ಪುಸ್ತಕ ಪ್ರದರ್ಶನ ನೋಡುವುದು, ಅಧ್ಯಯನಕ್ಕಾಗಿ ಬಳಸಿಕೊಳ್ಳುವುದು ಸಾವಿರಾರು ಜನ.

ಆದರೆ ಎಂದೂ ಯಾವ ಮುಖ್ಯ ಮಂತ್ರಿಯೂ, ಶಿಕ್ಷಣ ಸಚಿವರೂ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಸಚಿವರೂ, ಸಾಂಸ್ಕೃತಿಕ ಅಭಿಮಾನದ ಮಂತ್ರಿಮಾನ್ಯರು ಪತ್ರಿಕೆ ನೋಡಿದ್ದಿಲ್ಲ, 'ಪುಸ್ತಕಮನೆ'ಗೆ ಕಾಲಿಟ್ಟದ್ದಿಲ್ಲ.

ಆದರೂ ಮಹಾಕವಿ ವೀರಪ್ಪ ಮೊಯಿಲಿಯವರ ಕನಸಿನ ಕೂಸಾದ, ಪ್ರತಿಷ್ಠೆಯ ಪ್ರತೀಕವಾದ ಪುಸ್ತಕ ಪ್ರಾಧಿಕಾರ, ನಿಜವಾದ ಪುಸ್ತಕ ಪ್ರಿಯರ ಕೇಂದ್ರವಾಗದೆ, ಹಣ ಹಂಚುವ ತಾಣವಾಗಿ ಹೋಯಿತು. ಹಣ ಹಂಚಿಕೊಂಡವರ ಕುರಿತಾದ ತನಿಖೆಯ ಕಡತ ಇಲಾಖೆಯಿಂದ ರಾಜ್ಯಪಾಲರ ಭವನಕ್ಕೆ ರವಾನೆಯಾಗಿ, ಧೂಳು ತಿನ್ನುತ್ತ ಕುಳಿತಿದೆ. ಪ್ರಾರಂಭವಾದ ದಿನದಿಂದ ಈವತ್ತಿನವರೆಗೂ, ಮೊಯಿಲಿಯವರ ಕನಸೇ ಇದೋ ಎನ್ನುವಂತೆ; ನಿವೃತ್ತ ಪ್ರಾಧ್ಯಾಪಕರು ಇಲ್ಲವೇ ಹಾಲಿ ಪ್ರಾಧ್ಯಾಪಕರ ವಿಹಾರಸ್ಥಳವಾಗಿ ಹೋಗಿದೆ ಪುಸ್ತಕ ಪ್ರಾಧಿಕಾರ. ಪ್ರಾಚೀನ ಕಾಲದಲ್ಲಿ 'ಜ್ಞಾನ' ಬಡ ಬ್ರಾಹ್ಮಣರ ಸೊತ್ತು ಎನ್ನುವಂತೆ. ಅದು ಬಿಟ್ಟು ಅವತ್ತು ಇವತ್ತು, ಅವರಿಗೆ ಬೇರೆ ತಿನ್ನುವುದಕ್ಕೂ ಗತಿ ಇಲ್ಲ ಎನ್ನುವಂತೆ .

ಎಲ್ಲಕ್ಕೂ ವಿಶೇಷವಾಗಿ ಆಳುವ ಸರ್ಕಾರಕ್ಕೆ ಮಂತ್ರಿ ಪದವಿ ತಪ್ಪಿದ ಜಾತಿ ಜನಾಂಗಕ್ಕೆ ನಿಗಮ, ಮಂಡಳಿಗಳಂತೆ ಸಂತೃಪ್ತಿ ಪಡಿಸುವ ಕುರ್ಚಿಯೊಂದನ್ನು ಹೀಗೆ ಪ್ರಾಧಿಕಾರ, ಅಕಾಡಮಿಗಳೆಂದು ಒಗೆಯುವ ಪರಿಪಾಠ - ಕರುಣಾಜನಕ ಸ್ಥಿತಿ ಇವಕ್ಕೆ ಬಂದಿವೆ. ಹೀಗಾಗಿ ಆಯಾ ಜಾತಿ ಜನಾಂಗದ ಗುಣಗಳ ಸಂಕೇತವಾಗಿ, ಪ್ರಾಧ್ಯಾಪಕ ವೃತ್ತಿಯ ಬೌದ್ಧಿಕ ಕುತಂತ್ರವಾಗಿ, ಎರಡೆರಡು ಸ್ಥಾನಮಾನಗಳ ಕಾರು ಬಾರಾಗಿ ಕೂಡ ಇವು ಕಂಗೊಳಿಸುತ್ತಿವೆ.

ಇದರಿಂದಾಗಿಯೇ ಮಳಿಗೆಗೂ ಮನೆಗೂ ಅಂತರ ತಪ್ಪಿಹೋದ ಚಿಂತಾಜನಕ ಸ್ಥಿತಿ ತಲುಪಿ ಬಿಟ್ಟಿದ್ದಾಯಿತು.

ಕೆಲಕಾಲದ ಹಿಂದೆ ಪುಸ್ತಕ ಪ್ರಾಧಿಕಾರ, ಕನ್ನಡ ಹಂಪಿ ವಿಶ್ವವಿದ್ಯಾನಿಲಯ – ಎರಡಕ್ಕೂ ಜನ್ಮದಾತರಾದ ವೀರಪ್ಪಮೊಯಿಲಿಯವರೇ, ಅವುಗಳ ಕಾರ್ಯವೈಖರಿ ಕಂಡು ಮರುಗಿ, ನನ್ನ ಕನಸು ಆಸೆ ಇದಲ್ಲ, ಹೀಗಾಗಬಾರದಿತ್ತು ಎಂದು ಶೋಕ ಶ್ಲೋಕವಾದಂತೆ ಬಹಿರಂಗವಾಗಿ ಹಲುಬಿದರು. ಅವರ ಮುಖಕ್ಕೇ, ಅಷ್ಟು ಹೊತ್ತಿಗಾಗಲೇ ಹಲವು ಸ್ಥಾನಮಾನ ಹಿಡಿದು ಕೂತು ಅಭ್ಯಾಸವಾಗಿದ್ದ ಮದಾಂಧ ವ್ಯಕ್ತಿ, ಅಡ್ಡಡ್ಡ ಮಾತಾಡಿ ಪ್ರಚಾರಗಿಟ್ಟಿಸಿದ್ದಾಯಿತು. ಅದರಿಂದ ಮೊಯಿಲಿಯವರು ಹೃದಯಕ್ಕಾದ ನೋವು, ಇಲ್ಲದ ಆ ದೇವರಿಗೇ ಗೊತ್ತು.

ಆದರೆ ಈ ಎರಡೂ ಸಂಸ್ಥೆಗಳು ನಿಜಕ್ಕೂ ತಾವು ಪ್ರಾರಂಭವಾದ, ಪ್ರಾರಂಭಿಸಲು ಕಾರಣವಾದ ರೀತಿನೀತಿಯಲ್ಲಿ ನಡೆಯುತ್ತಿವೆಯೇ? ಅವುಗಳ ಅಗತ್ಯ ಮೊಯಿಲಿಯವರಿಗೆ ಮಾತ್ರವಲ್ಲ ಈ ನಾಡಿಗೆ ಇವೆಯೇ?

ನಾಡಿನಲ್ಲಿ ಎಷ್ಟೊಂದು ವಿಶ್ವವಿದ್ಯಾನಿಲಯಗಳು ಇಲ್ಲ. ಆದರೆ ಕನ್ನಡ ವಿಶ್ವವಿದ್ಯಾನಿಲಯದ ನೆಲೆಗಟ್ಟು ಏನು? ಯಾಕೆ ? ಇತರ ವಿಶ್ವವಿದ್ಯಾನಿಲಯಗಳಂತೆಯೇ ಎಂ.ಎ, ಪಿ.ಹೆಚ್.ಡಿ. ಪಡೆದ ಪಟ್ಟಭದ್ರರೇ ಇಲ್ಲೂ ತೂರಿಕೊಂಡು, ವಿದ್ಯೆ ಕಲಿಸುವುದಲ್ಲ ತಯಾರಿಸುವುದು ಕೂಡ ಹೋಗಿ ಮಾರುವುದು ಎನ್ನುವಂತಾಗಿದೆಯೇ. ಅನುದಿನವೂ ಅಥವಾ ರಾತ್ರೋರಾತ್ರಿ ತಾವೇ ಬರೆಬರೆದು ಬಿಸಾಕುತ್ತಿರುವ ಪುಸ್ತಕಗಳು, ದಿನಕ್ಕೊಂದು ನಿಕಾರ್ಯಗಳನ್ನು ಹುಟ್ಟುಹಾಕುತ್ತ, ಅದಲು ಬದಲು ಕಂಚಿ ಕದಲು ಎನ್ನುವಂತೆ ಸ್ಥಾನಾಂತರದ ಕಣ್ಣಾಮುಚ್ಚಾಲೆ ಆಡುತ್ತ, ಸದಾ ಬೆಂಗಳೂರಿನಲ್ಲಿಯೇ ಕ್ಯಾಂಪ್ ಹೂಡಿ ಪ್ರಾಧಿಕಾರ – ಅಕಾಡಮಿ – ಪ್ರಶಸ್ತಿ – ಮೀಟಿಂಗುಗಳಲ್ಲಿ ಕಾಲ ಕಳೆಯುವ ಕ್ರೀಡಾಂಗಣವಾಗಿ ಹೋಯಿತೇ ? ಕನ್ನಡ ವಿಶ್ವವಿದ್ಯಾನಿಲಯ ! ನಾಡು ನುಡಿ ಸಂಸ್ಕೃತಿಗಾಗಿ ದುಡಿಯುವವರನ್ನು ತಿರಸ್ಕರಿಸಿ, ತಮಗೆ ಬೇಕಾದವರನ್ನೇ ಗಂಡ ಹೆಂಡತಿ ಸಮೇತ ನಡೆಮುಡಿ ಹಾಸಿ

ಕರೆಸಿಕೊಂಡು ಪಾದ ಪೂಜೆ ಮಾಡುತ್ತ , ಸೀರೆ ಕುಪ್ಪಸ, ಅರಿಸಿನ ಕುಂಕುಮ ಬಳೆ ಸಮೇತ ಸತ್ಕರಿಸುತ್ತ, ಮುಂದಿನ ಸ್ಥಾನ, ಮತ್ತಲ್ಲೇ ಮುಂದುವರಿಯುವ ಹಂಬಲ ಹೊತ್ತು ಕೂಟ ರಚನೆಯ ತ್ರಿಕೂಟ ಪರ್ವತವಾಗಿ ಹೋಯಿತೆ ಕನ್ನಡವು ಹಂಪಿ ವಿಶ್ವವಿದ್ಯಾನಿಲಯವು !

ಅದಕ್ಕೆ ಯಾವ ರೀತಿಯಿಂದಲೂ ಭಿನ್ನವಾಗಿ ಉಳಿಯಲಿಲ್ಲ ಪುಸ್ತಕ ಪ್ರಾಧಿಕಾರ. ಮುಖ್ಯ ಮಂತ್ರಿ, ಸಂಸ್ಕೃತಿ ಇಲಾಖೆ ಮಂತ್ರಿ , ಕಾರ್ಯದರ್ಶಿ, ನಿರ್ದೇಶಕರ ಬಾಲಬಡಕರಿಗೆಲ್ಲಾ ಒಂದು ಸ್ಥಳ ದಾನವಾಗಿ ಹೋಗಿರುವ ನೆಲೆಯಲ್ಲಿ ಸಮಾಜ, ಸಂಸ್ಕೃತಿ ಏನನ್ನು ತಾನೇ ನಿರೀಕ್ಷಿಸಲು ಸಾಧ್ಯ ? ಒಮ್ಮೆ ಗಂಡ ಒಂದು ಜಾತಿ ಹೆಸರಿನಲ್ಲಿ ತೂರಿಕೊಂಡರೆ, ಇನ್ನೊಮ್ಮೆ ಹೆಂಡತಿ ಇನ್ನೊಂದು ಜಾತಿ ಹೆಸರಿನಲ್ಲಿ ಇನ್ನೊಂದು ಕಡೆ ಜಾಗ ಹಿಡಿಯುವ ಕೊಕ್ಕೋ ಆಟಕ್ಕೆ ಇವೆಲ್ಲವನ್ನೂ ನಮ್ಮ ಜನತೆ ಸಿದ್ಧ ಪಡಿಸಿದಂತೆ ಆಗಿದೆ.

ಇಂಥವರನ್ನೂ ಆರಿಸುವುದು, ಹಾರಿಸುವುದು, ತುರುಕುವುದು ಎಂಬಂತಹ ಜವಾಬ್ದಾರಿ ಹೊತ್ತ ಇಲಾಖೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ. ಅಲ್ಲಿ ವರ್ಷಕ್ಕೊಮ್ಮೆ, ತಿಂಗಳಿಗೊಮ್ಮೆ , ವಾರಕ್ಕೊಮ್ಮೆ ಆಯುಕ್ತರು – ನಿರ್ದೇಶಕರು ಕಾಣಿಸಿಕೊಳ್ಳುವುದು ಒಂದು ರೂಢಿ. ಅಲ್ಲಿರುವ ಅಧಿಕಾರಿಗಳು ಕೊಠಡಿಯಲ್ಲಿರುವುದಕ್ಕಿಂತ ಕೋರ್ಟು ಕಛೇರಿಗಳ ಹಿಂದೆ ಮುಂದೆ ಅಡ್ಡಾಡುವುದೇ ಪದ್ಧತಿ. ಹೀಗಿರುವಾಗ ಯಾವ ಅಧ್ಯಕ್ಷರಾದರೆ ಏನು, ಸದಸ್ಯರಾದರೆ ಏನು ಎಂದು ತಿಳಿಯಬೇಕಾಗಿಲ್ಲ. ಆದಷ್ಟುದನಿ ಎತ್ತದ, ತಿರುಗಿ ಬೀಳದ, ಉಸಿರಾಡದ ಸರ್ಕಾರಿ ಗುಲಾಮ ತಲೆಗಳನ್ನೇ ಹುಡುಕಿ, ಸಂಪರ್ಕಿಸಿ, ಕಾಟಾಚಾರಕ್ಕೆ ಸಂತೆ ಹೊತ್ತಿಗೆ ಮೂರುಮೊಳ ಎನ್ನುವಂತೆ ಪೋಣಿಸುವುದೇ ಇಲಾಖೆಯ ಕಸುಬು. ಯಾಕೆಂದರೆ ಅವರೂ ರಾತ್ರೋ ರಾತ್ರಿ ಅಧಿಕಾರ ಸ್ವೀಕಾರವಲ್ಲ, ಕುರ್ಚಿಯನ್ನು ಆಕ್ರಮಿಸಿಕೊಂಡವರೇ ಎನ್ನುವುದನ್ನು ಮರೆಯುವಂತಿಲ್ಲ. ಅವರ ಅಣ್ಣ ತಮ್ಮ , ಅಕ್ಕ ತಂಗಿ, ಬಂಧು ಬಳಗ ಕೂಡ ಸರ್ಕಾರದ ನಾನಾ ಪವಿತ್ರ ಸ್ಥಾನದಲ್ಲಿ ಕುಳಿತಿರುವಾಗ ಇದು ಯಾವ ಮಹಾ ಸಾಧನೆ ಬಿಡಿ.

ಹೌದು. ರಾಷ್ಟ್ರದಲ್ಲಿ , ನಾಡಿನಲ್ಲಿ , ಉಗ್ರಗ್ರಾಮಿಗಳು, ಭಯೋತ್ಪಾದಕರು, ನಕ್ಸಲೀಯರ ಹಾವಳಿ ನಡೆದಿದೆಯಷ್ಟೆ. ನಿಜವಾಗಿ ಅವರು ಅಲ್ಪಸಂಖ್ಯಾತರು. ಏಕೆಂದರೆ ಈ ಬಗೆಯ ಬಹುಸಂಖ್ಯಾತರು ಹೊರಗಲ್ಲ, ಒಳಗೇ ಇದ್ದು , ಕೊಳತು ನಾರುತ್ತಿರುವ ಸ್ಥಿತಿ , ಸಾಂಸ್ಕೃತಿಕ ಲೋಕದ್ದು , ಇಲಾಖೆಯದ್ದು . ಹೊರಗೆ ತಮ್ಮ ಪಾಡಿಗೆ ತಾವು ಕೆಲಸ , ಸಾಧನೆಯನ್ನು ನಡೆಸಿಕೊಂಡು ಹೋಗಲು ಅವಕಾಶ ನೀಡದಷ್ಟು , ನಿಜವಾಗಿ ದುಡಿಯುವವರಿಗೆ ಸಮಾಜದಲ್ಲಿ ಮಾನಮರ್ಯಾದೆ ಸಿಗಲಾರದಷ್ಟು , ಅವರ ಕೆಲಸ ಕಾರ್ಯಗಳಿಗೆ ಮಸಿ ಬಳಿಯುವಷ್ಟು ಹುನ್ನಾರಗಳು ಹೂಡುವುದು ಇವರ ವೃತ್ತಿಯೇ ಆಗಿದೆ. ಯಾವ ಪಕ್ಷ , ಸರ್ಕಾಗಳು ಬಂದರೂ ಇವರಿಗೆ ಬಾಧಕವಿಲ್ಲ. ಅದಕ್ಕೆ ತಕ್ಕ ಮುಖವಾಡಗಳು, ಸೂಟು ಬೂಟುಗಳು ಸಿದ್ಧ ಪಡಿಸಿಕೊಂಡಿರುವ ಚತುರರು ಇವರು.

ಇಂಥವರಿಂದ ನಾಡಿಗೆ, ಕಲಾಕ್ಷೇತ್ರಗಳಿಗೆ, ಕೆಲಸಗಳಿಗೆ ಎಂದೂ ಘನತೆ ಗೌರವ ಸಲ್ಲುವುದೇ ಇಲ್ಲ . ಇನ್ನೇನು ಮಾರ್ಚಿಯಲ್ಲಿ ಈ ಎಲ್ಲ ಆಟ , ಪ್ರಯೋಗ, ಪ್ರಚಾರ , ಪ್ರದರ್ಶನ ಬಿರುಸಿನಿಂದ ನಡೆಯಲಿದೆ . ಅದಕ್ಕಾಗಿ ತಯಾರಿಯೂ ನಡೆದಿದೆ. ನಾನಾ ಬಗೆಯ ಸಮಾಲೋಚನೆ, ಸಮಾರಂಭ, ತುಂಬಿ ತುಳುಕಲಿವೆ.

ಸರ್ಕಾರಿ ಕೆಲಸ ದೇವರ ಕೆಲಸ, ಪುಸ್ತಕ ಮಳಿಗೆಯೂ ಪುಸ್ತಕ ಮನೆಯೂ, ಸ್ವಂತ ಊರು ಬೆಂಗಳೂರು – ಇವುಗಳ ಹಿಂದು ಮುಂದು ತಿಳಿಯದವರ ದಂಡೇ ರಾಜಧಾನಿಯಲ್ಲಿ ಈಗ ಬೀಡು ಬಿಡಲಿದೆ. ಐದು ವರ್ಷಕ್ಕೆ ಒಮ್ಮೆ ಚುನಾವಣೆಯಾದರೆ ಮೂರು ಮೂರು ವರ್ಷಕ್ಕೆ ಸಾಂಸ್ಕೃತಿಕ ಜಾತ್ರೆಯ ಕಳ್ಳ ಕಾಕರ ಸಮ್ಮಿಲನ ಲಾಡ್ಜ್‌ಗಳಲ್ಲಿ, ಬೀದಿ ಬೀದಿಯಲ್ಲಿ , ಕನ್ನಡ ಭವನ ಬಹು ಮಹಡಿ ಕಟ್ಟಡಗಳಲ್ಲಿ , ಮುಂದುವರಿದು ರೆಸ್ಟೋರೆಂಟ್-ರೆಸಾರ್ಟ್‌ಗಳಲ್ಲಿ ನೆರೆಯಲಿದ್ದಾರೆ ಮೈ ಮರೆಯಲಿದ್ದಾರೆ . ಮುಖ್ಯ ಮಂತ್ರಿ ಜಾಗದಲ್ಲಿ ಕಾರ್ಯದರ್ಶಿ, ಸಂಸ್ಕೃತಿ ಇಲಾಖೆ ಮಂತ್ರಿ ಜಾಗದಲ್ಲಿ ನಿರ್ದೇಶಕ, ಎಂಎಲ್‌ಎ ಜಾಗದಲ್ಲಿ ಪುಡಿ ಹುಡಿ ಅಧಿಕಾರಿಗಳು – ಕಾದು ಕುಳಿತಿದ್ದಾರೆ . ರಾಜಕಾರಣಿಗಳು ಯಾರು ಎಂಬುದು ನಿಜವಾಗಿಯೂ ನಾಚಿ ನೀರಾಗುವ ಧಾರಾವಾಹಿಯನ್ನು ಸಮೂಹ ಮಾಧ್ಯಮಗಳಲ್ಲಿ ತಪ್ಪದೆ ನೋಡಿ, ಆನಂದಿಸಬಹುದು. ☐

೨

# ಸಮಕಾಲೀನತೆಯ ಆತಂಕಗಳು

## ಜಿ.ಎಸ್. ಶಿವರುದ್ರಪ್ಪ

ಕರ್ನಾಟಕದ ರಾಜ್ಯಪಾಲರೂ ಮೈಸೂರು ವಿಶ್ವವಿದ್ಯಾನಿಲಯದ ಕುಲಾಧಿಪತಿಗಳೂ ಆದ ಘನತೆವೆತ್ತ ಮಾನ್ಯ ರಾಮೇಶ್ವರ ಠಾಕೂರ್ ಅವರೆ, ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳಾಗಿ ಕಾರ್ಯ ನಿರ್ವಹಿಸುತ್ತಿರುವ ಪ್ರೊ. ಪಿ. ಈಶ್ವರಭಟ್ಟರೆ, ಮಾನ್ಯ ಸಿಂಡಿಕೇಟ್ ಸದಸ್ಯರೆ, ವೇದಿಕೆಯ ಮೇಲಿನ ಗಣ್ಯರೆ, ಮೈಸೂರು ವಿಶ್ವವಿದ್ಯಾನಿಲಯದಿಂದ ವಿವಿಧ ಪದವಿಗಳನ್ನು ಪಡೆದುಕೊಂಡ ಪ್ರೀತಿಯ ವಿದ್ಯಾರ್ಥಿಗಳೆ ಮತ್ತು ಈ ಸಮಾರಂಭಕ್ಕೆ ಆಗಮಿಸಿರುವ ಮಹನೀಯರೆ ಮಹಿಳೆಯರೆ.

ನನ್ನ ಮಾತೃ ಸಂಸ್ಥೆಯಾದ ಮೈಸೂರು ವಿಶ್ವವಿದ್ಯಾನಿಲಯದ ಎಂಬತ್ತೆಂಟನೆಯ ವಾರ್ಷಿಕ ಘಟಿಕೋತ್ಸವದ ಸಂದರ್ಭದಲ್ಲಿ ಮುಖ್ಯ ಅತಿಥಿಯಾಗಿ ನಾನು ಆಹ್ವಾನಿತನಾಗಿರುವುದು ಇದರ ಹಳೆಯ ವಿದ್ಯಾರ್ಥಿಯಾದ ನನಗೆ ಸಂದ ದೊಡ್ಡ ಗೌರವವೆಂದೇ ನಾನು ಭಾವಿಸುತ್ತೇನೆ. ಈ ಅಪರೂಪದ ಅವಕಾಶವನ್ನು ನನಗೆ ತಂದುಕೊಟ್ಟ ಕುಲಪತಿಗಳಿಗೆ ಹಾಗೂ ಸಿಂಡಿಕೇಟ್‌ಗೆ ನನ್ನ ವಂದನೆಗಳು.

ಈ ಸಮಾರಂಭದ ಮತ್ತು ವಿವಿಧ ಪದವಿಗಳನ್ನು ಸ್ವೀಕರಿಸಲು ಇಲ್ಲಿ ಸೇರಿರುವ ಬಹು ಸಂಖ್ಯೆಯ ತರುಣ ವೃಂದದ ಉತ್ಸಾಹ ಸಹಜವಾಗಿಯೆ ನನ್ನ ವಿದ್ಯಾರ್ಥಿ ಜೀವನದ ದಿನಗಳೊಳಕ್ಕೆ ಮಾನಸಿಕವಾಗಿ ನನ್ನನ್ನು ಕರೆದೊಯ್ಯುತ್ತದೆ. ಕಳೆದ ಶತಮಾನದ ನಲವತ್ತರ ದಶಕದ ಕಾಲದಲ್ಲಿ ಮೈಸೂರು ಮಹಾರಾಜಾ ಕಾಲೇಜನ್ನು ಪ್ರವೇಶಿಸಿದ ಕಾಲಕ್ಕೆ ಮೈಸೂರು ವಿಶ್ವವಿದ್ಯಾನಿಲಯವೆಂದರೆ ಮೈಸೂರಿನ ಮಹಾರಾಜಾ ಕಾಲೇಜು ಮತ್ತು ಬೆಂಗಳೂರಿನ ಸೆಂಟ್ರಲ್ ಕಾಲೇಜು ಈ ಎರಡೇ. ಒಂದು ಕಲಾ ವಿಷಯಗಳಿಗೆ ಮತ್ತೊಂದು ವಿಜ್ಞಾನದ ವಿಷಯಗಳಿಗೆ. ಅದರಲ್ಲಿಯೂ ಮಹಾರಾಜಾ ಕಾಲೇಜು ಅಂದಿನ ಮಹತ್ವದ ಸಾಂಸ್ಕೃತಿಕ ಸಂಸ್ಥೆಯಾಗಿತ್ತು. ನವೋದಯದ ಆಚಾರ್ಯ ಬಿ.ಎಂ.ಶ್ರೀ., ಪ್ರೊ. ಟಿ.ಎಸ್. ವೆಂಕಣ್ಣಯ್ಯ, ಡಾ|| ಎಸ್. ರಾಧಾಕೃಷ್ಣನ್, ಪ್ರೊ. ಎನ್.ಎಸ್. ಸುಬ್ಬರಾವ್, ಪ್ರೊ. ಎ.ಆರ್. ವಾಡಿಯಾ - ಇಂಥವರಿಂದ, ಹೆಸರುವಾಸಿಯಾದ ಮೊದಲ ಉಜ್ವಲವಾದ ಕಾಲಘಟ್ಟ ಮುಗಿದು ಎರಡನೆಯ ಉತ್ಕರ್ಷ ಸಂದರ್ಭದಲ್ಲಿ ವಿದ್ಯಾರ್ಥಿಯಾಗಿ ಮಹಾರಾಜಾ ಕಾಲೇಜನ್ನು ಪ್ರವೇಶಿಸಿದ ನನಗೆ, ಕನ್ನಡದ ನೆಲದಲ್ಲಿ ನಿಂತು ವಿಶ್ವಮಾನವನ ಕನಸನ್ನು ಕಂಡ ಯುಗದ ಕವಿ ಕುವೆಂಪು, ನಡೆದಾಡುವ ವಿಶ್ವಕೋಶವೆಂದು ಹೆಸರಾದ ಪ್ರೊ. ಡಿ.ಎಲ್. ನರಸಿಂಹಾಚಾರ್ಯ, ಪ್ರತಿಭೆ-ಪಾಂಡಿತ್ಯಗಳ ಹದವಾದ ಪಾಕದಂತಿದ್ದ ಪ್ರೊ. ತೀ.ನಂ. ಶ್ರೀಕಂಠಯ್ಯನವರು, ವಾತ್ಸಲ್ಯದ ಪ್ರತಿಮಾ ಸ್ವರೂಪರಾದ ಪ್ರೊ. ತ.ಸು. ಶಾಮರಾಯರು ಇಂಥ ಮಹಾ ಆಚಾರ್ಯರ ಶಿಷ್ಯನಾಗುವ ಸುಯೋಗವನ್ನು ಮೈಸೂರು ವಿಶ್ವವಿದ್ಯಾನಿಲಯವು ಕರುಣಿಸಿ ನನ್ನ ವ್ಯಕ್ತಿತ್ವವನ್ನು ಬೆಳೆಯಿಸಿತು ಎನ್ನುವುದನ್ನು ನಾನು ಅತ್ಯಂತ ಕೃತಜ್ಞತೆಯಿಂದ ನೆನೆಯುತ್ತೇನೆ. ಅದೇ ಕಾಲದಲ್ಲಿ ಮಹಾರಾಜಾ ಕಾಲೇಜಿನ ಬೇರೆ ಬೇರೆಯ ವಿಭಾಗಗಳಿಗೆ ಸೇರಿದ ಪ್ರೊ. ವಿ.ಎಲ್. ಡಿಸೌಜಾ, ಪ್ರೊ. ಟಿ.ಎ. ಪುರುಷೋತ್ತಮ್, ಪ್ರೊ. ಎಂ. ಯಾಮುನಾಚಾರ್ಯ, ಪ್ರೊ. ಎಸ್.ವಿ. ರಂಗಣ್ಣ ಪ್ರೊ. ಎಂ.ವಿ. ಗೋಪಾಲಸ್ವಾಮಿ - ಇಂಥವರು ನಮ್ಮ ಪಾಲಿಗೆ ಅಂದಿನ ದಾರಿದೀಪಗಳಾಗಿದ್ದರು. ಆ ಕಾಲದ ಉತ್ಸಾಹ, ಸಂಭ್ರಮ, ಅಂದು ಗುರು-ಶಿಷ್ಯರ ನಡುವೆ ಇದ್ದ ಆತ್ಮೀಯ ಸಂಬಂಧ, ಸಾಹಿತ್ಯ-ಕಲೆ-ವಿದ್ವತ್ತು-ಇತಿಹಾಸ-ತತ್ತ್ವಜ್ಞಾನ ಇತ್ಯಾದಿ ಕ್ಷೇತ್ರಗಳಲ್ಲಿ ಅಂದಿನ ಅಧ್ಯಾಪಕರು ಪಡೆದುಕೊಂಡಿದ್ದ ಪರಿಣತಿ ಮತ್ತು ಆ ಕಾರಣಕ್ಕೆ ಅವರು ಗಳಿಸಿಕೊಂಡ ಹೆಸರು ಮತ್ತು ಗೌರವ ಇತ್ಯಾದಿಗಳು ಇಂದು ಅತ್ಯಂತ ವಿರಳವಾದ ಸಂಗತಿಗಳಾಗಿವೆ. ಈಗ ನಾನು ಪ್ರಸ್ತಾಪಿಸಿದ, ಮೈಸೂರು ವಿಶ್ವವಿದ್ಯಾನಿಲಯದ ಮೊದಲ ಕಾಲಘಟ್ಟದಲ್ಲಿ ಭಾರತದ ಮಹಾನ್ ತತ್ತ್ವಜ್ಞಾನಿ ಡಾ|| ಎಸ್. ರಾಧಾಕೃಷ್ಣನ್ ಅವರು ೧೯೨೧ರಲ್ಲಿ ಮಹಾರಾಜಾ ಕಾಲೇಜಿನಿಂದ ಕಲ್ಕತ್ತಾ ವಿಶ್ವವಿದ್ಯಾಲಯಕ್ಕೆ ತತ್ತ್ವಶಾಸ್ತ್ರದ ಅಧ್ಯಾಪಕರಾಗಿ ಹೊರಟಾಗ

ಮಹಾರಾಜಾ ಕಾಲೇಜಿನ ವಿದ್ಯಾರ್ಥಿ ಸಮುದಾಯ, ಕೋಚ್ ಗಾಡಿಯೊಂದನ್ನು ಹೂಗಳಿಂದ ಅಲಂಕರಿಸಿ ಅದರಲ್ಲಿ ಅವರನ್ನು ಕೂರಿಸಿ ಅದಕ್ಕೆ ಕುದುರೆಯನ್ನು ಕಟ್ಟದೆ ವಿದ್ಯಾರ್ಥಿಗಳೇ ರೈಲ್ವೆ ಸ್ಟೇಷನ್‌ವರೆಗೆ ಎಳೆದುಕೊಂಡು ಹೋದರೆಂಬ ಸಂಗತಿಯನ್ನು ಪ್ರೊ. ಎ.ಎನ್. ಮೂರ್ತಿರಾಯರು ಒಂದೆಡೆ ದಾಖಲಿಸುತ್ತಾ 'ಮೈಸೂರಿನಿಂದ ಹೊರಟ ಡಾ|| ಎಸ್. ರಾಧಾಕೃಷ್ಣನ್ ಅವರಿಗೆ ಕೊಟ್ಟಂಥ ಬೀಳ್ಕೊಡುಗೆ ಯಾವ ಚಕ್ರವರ್ತಿಗೂ ದೊರಕಿರಲಾರದು' - ಎಂದು ಬರೆಯುತ್ತಾರೆ. ಅಂದಿನ ಗುರು-ಶಿಷ್ಯರ ಸಂಬಂಧಕ್ಕೆ ಇದೊಂದು ಸಂಕೇತವಾಗಿದೆ.

ಮೈಸೂರು ವಿಶ್ವವಿದ್ಯಾನಿಲಯ ಭಾರತದ ಅತ್ಯಂತ ಹಳೆಯ ವಿಶ್ವವಿದ್ಯಾನಿಲಯಗಳಲ್ಲಿ ಒಂದು. ಮೈಸೂರಿನ ಮಹಾರಾಜರಾದ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಮತ್ತು ಅವರ ಸಚಿವೋತ್ತಮರಾದ ಸರ್ ಎಂ. ವಿಶ್ವೇಶ್ವರಯ್ಯನವರ ಪ್ರಯತ್ನಗಳಿಂದಾಗಿ, ೧೯೧೬ರಲ್ಲಿ ಮೈಸೂರು ವಿಶ್ವವಿದ್ಯಾನಿಲಯವು ಮದ್ರಾಸ್ ವಿಶ್ವವಿದ್ಯಾಲಯದೊಂದಿಗೆ ಇದ್ದ ತನ್ನ ಅಧೀನತೆಯನ್ನು ಕಳಚಿಕೊಂಡು ಸ್ವತಂತ್ರ ಅಸ್ತಿತ್ವವನ್ನು ಪಡೆದುಕೊಂಡಿತು. ೧೯೧೮ರಲ್ಲಿ ನಡೆದ ಮೈಸೂರು ವಿಶ್ವವಿದ್ಯಾನಿಲಯದ ಪ್ರಥಮ ಘಟಿಕೋತ್ಸವದಲ್ಲಿ ಮೈಸೂರಿನ ಮಹಾರಾಜರಾದ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡಕ್ಕೆ ಪೂರ್ಣ ಮನ್ನಣೆ ಇರಬೇಕೆಂಬ, ಈ ವಿಶ್ವವಿದ್ಯಾನಿಲಯದಿಂದ ಪದವೀಧರರಾದ ಯುವಕರು ತಾವು ಶಿಕ್ಷಣದ ಮೂಲಕ ಪಡೆದುಕೊಂಡ ತಿಳಿವಳಿಕೆಯನ್ನು ತಮ್ಮ ಸುತ್ತಲಿನ ಜನಕ್ಕೆ ಅವರು ತಿಳಿದುಕೊಳ್ಳಲು ಸಾಧ್ಯವಾಗುವಂತಹ ಕನ್ನಡದಲ್ಲಿ ಹೇಳಲು ಶಕ್ತರಾಗಬೇಕೆಂಬ ಸದಾಶಯವನ್ನು ವ್ಯಕ್ತಪಡಿಸಿದರು. ಪ್ರಥಮ ಘಟಿಕೋತ್ಸವದಲ್ಲಿ ಶ್ರೀಮನ್ ಮಹಾರಾಜರು ಪದವೀಧರರನ್ನು ಉದ್ದೇಶಿಸಿ ಹೇಳಿದ ಮಾತು ನಮ್ಮ ಶಿಕ್ಷಣದಲ್ಲಿ ಕನ್ನಡಕ್ಕೆ ಇರಬೇಕಾದ ಸ್ಥಾನವನ್ನೂ ಶಿಕ್ಷಣ ಪಡೆದವರ ಸಾಮಾಜಿಕ ಜವಾಬ್ದಾರಿಯನ್ನೂ ಬಹು ಸ್ಪಷ್ಟವಾಗಿ ಮಂಡಿಸುತ್ತದೆ. ೧೯೧೮ರ ಈ ಮಾತಿನ ಜತೆಗೆ, ೧೯೬೬ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಿಂದ ಶ್ರೀ ಕುವೆಂಪು ಅವರು ಗೌರವ ಡಾಕ್ಟರೇಟ್ ಪದವಿಯನ್ನು ಸ್ವೀಕರಿಸಿದ ಸಂದರ್ಭದಲ್ಲಿ ಆಡಿದ ಮಾತೊಂದನ್ನು ಜೋಡಿಸಿಕೊಂಡು ನೋಡುವುದು ಉಚಿತವೆಂದು ನಾನು ಭಾವಿಸುತ್ತೇನೆ. ಆ ಮಾತು ಹೀಗಿದೆ; 'ಭಾಷಾನುಗುಣವಾಗಿ ರಾಜ್ಯಗಳನ್ನು ವಿಂಗಡಿಸಿದಾಗಲೇ ನಮ್ಮ ಪ್ರಜಾಸತ್ತಾತ್ಮಕವಾದ ರಾಜ್ಯಾಂಗ ಈ ಪ್ರಾದೇಶಿಕ ವೈಶಿಷ್ಟ್ಯವನ್ನು ಕಾನೂನುಬದ್ಧವಾಗಿಯೇ ಗುರುತಿಸಿಕೊಂಡಂತಾಗಿದೆ. ಆದ್ದರಿಂದ ಆಯಾ ಭಾಷಾ ಪ್ರದೇಶಗಳಲ್ಲಿರುವ ವಿಶ್ವವಿದ್ಯಾಲಯಗಳು ಆಯಾ ಪ್ರದೇಶದ ಭಾಷಾ ಸಾಹಿತ್ಯ ಕಲಾ ಸಂಸ್ಕೃತಿಗಳಿಗೆ ವಿಶೇಷ ಪ್ರೋತ್ಸಾಹವೀಯುವುದು ಅತ್ಯಗತ್ಯ. ಏಕೆಂದರೆ ಆಯಾ ಪ್ರಾದೇಶಿಕ ವಿಶ್ವವಿದ್ಯಾಲಯಗಳು ಆ ಕೆಲಸವನ್ನು ಕೈಗೊಳ್ಳದಿದ್ದರೆ ಪ್ರಪಂಚದ ಇನ್ನಾವ ವಿದ್ಯಾಸಂಸ್ಥೆಗಳೂ ಅದನ್ನು ಕೈಗೊಳ್ಳುವುದಿಲ್ಲ' (ಸಮಗ್ರ ಗದ್ಯ : ೨, ಪು. ೩೬೨). ಕುವೆಂಪು ಅವರ ಈ ಮಾತು, ಪ್ರಾದೇಶಿಕ ಸಂಸ್ಕೃತಿಯ ಸಂರಕ್ಷಣೆ ಮತ್ತು ಸಂವರ್ಧನೆಯಲ್ಲಿ ವಿಶ್ವವಿದ್ಯಾಲಯಗಳು ವಹಿಸಬೇಕಾದ ಪಾತ್ರವೇನೆಂಬುದನ್ನು ಸ್ಪಷ್ಟವಾಗಿ ನಿರೂಪಿಸುತ್ತದೆ. ಆದರೆ ಈಚೆಗೆ ಈ ದೇಶದ ಬಹುಮುಖೀ ಸಂಸ್ಕೃತಿಯನ್ನು ನಿರ್ಲಕ್ಷಿಸಿ, ವಿಶ್ವವಿದ್ಯಾಲಯಗಳಿಗೆ ಇರಬೇಕಾದ ಮತ್ತು ಒಂದು ಕಾಲಕ್ಕೆ ಇದ್ದ ಪ್ರಾದೇಶಿಕ ಚಹರೆ ಹಾಗೂ ವೈಶಿಷ್ಟ್ಯಗಳನ್ನು ಕಡೆಗಣಿಸಿ ಎಲ್ಲ ವಿಶ್ವವಿದ್ಯಾಲಯಗಳಿಗೂ ಏಕರೂಪತೆಯನ್ನು ತರುವ ಪ್ರವೃತ್ತಿಯೊಂದು ಪ್ರಬಲವಾಗಿದೆ. ಹೀಗಾಗಿ ಏಕರೂಪದ ಅಂಗರಚನೆ, ಏಕರೂಪದ ಪಠ್ಯಕ್ರಮ, ಏಕರೂಪದ ಪರೀಕ್ಷಾಪದ್ಧತಿ ಇತ್ಯಾದಿಗಳಿಂದ ಶಿಕ್ಷಣವೆಂಬುದು ತನ್ನ ಸೃಜನಶೀಲತೆಯನ್ನು ಕಳೆದುಕೊಂಡು ಮಿಲಿಟರಿ ಕವಾಯತಿನಂತೆ ಆಗಿಬಿಡುವ ಅಪಾಯ ತಪ್ಪಿದ್ದಲ್ಲ. ಈ ಹಿನ್ನೆಲೆಯಲ್ಲಿ ಶಿಕ್ಷಣದಲ್ಲಿ ಪ್ರಾದೇಶಿಕ ಭಾಷೆಗಳ ಸ್ಥಾನ-ಮಾನ, ಪ್ರಾದೇಶಿಕ ಸಾಂಸ್ಕೃತಿಕ ಚಹರೆಗಳನ್ನು ಕಾಯ್ದುಕೊಳ್ಳುವ ಕಾಳಜಿಗಳು ಶಿಕ್ಷಣ ಪಡೆದವರ ಸಾಮಾಜಿಕ ಜವಾಬ್ದಾರಿ-ಇಂಥ ಜನಪರ ಚಿಂತನೆಗಳು ಈ ದೇಶದ ಆಡಳಿತಗಾರರನ್ನು ಹಾಗೂ ಶಿಕ್ಷಣತಜ್ಞರನ್ನು ತೀವ್ರವಾಗಿ ಕಲಕದೆ ಇರುವುದು ಆಶ್ಚರ್ಯದ ಸಂಗತಿಯೇನಲ್ಲ.

ಕರ್ನಾಟಕ ರಾಜ್ಯೋದಯವಾಗಿ ಐವತ್ತು ವರ್ಷಗಳು ಉರುಳಿದರೂ ಕನ್ನಡಕ್ಕೆ ಸಂಬಂಧಿಸಿದಂತೆ ಖಚಿತವಾದ ಭಾಷಾನೀತಿ ಹಾಗೂ ಭಾಷಾ ಯೋಜನೆಯೊಂದು ಅನುಷ್ಠಾನಕ್ಕೆ ಬಾರದೆ ನಮ್ಮ ಕಾಲದ ತೊಡಕಾದ ಸವಾಲುಗಳಲ್ಲಿ ಒಂದಾಗಿದೆ. ಒಂದು ಭೌಗೋಳಿಕ ಪರಿಸರದ ಸಂಸ್ಕೃತಿ ವಿಸ್ತಾರಗಳಿಗೂ ಅದು ಬಳಸುವ ಭಾಷೆಗೂ

ಇರುವ ಸಂಬಂಧವು ಸರ್ವ ವೇದ್ಯವಾದ ಸಂಗತಿಯಾಗಿದೆ. ಕನ್ನಡವು ಕರ್ನಾಟಕದಲ್ಲಿ ವಾಸಿಸುವ ಎಲ್ಲರ ಮಾತೃಭಾಷೆಯಲ್ಲದಿದ್ದರೂ ಅದು ಪರಿಸರದಿಂದ ದತ್ತವಾದ ಪ್ರಥಮ ಭಾಷೆಯೇ ಆಗಿದೆ. ನಮ್ಮದು ಕನ್ನಡದಲ್ಲಿ ಭಾವಿಸಿದ ಜನಪದ. ಹೀಗಿರುವಾಗ ಆಡಳಿತ ಶಿಕ್ಷಣ ಮತ್ತು ಜ್ಞಾನದ ಸೃಷ್ಟಿಗಳು ಕನ್ನಡದಲ್ಲಿಯೇ ಆಗಬೇಕೆನ್ನುವುದು ಸೂರ್ಯಸ್ಪಷ್ಟವಾದ ವಿಚಾರವಾಗಿದೆ. ಅಷ್ಟೇ ಅಲ್ಲ, ಜಗತ್ತಿನ ತಿಳಿವಳಿಕೆಯೆಲ್ಲವೂ ಕನ್ನಡಿಗರಿಗೆ ಕನ್ನಡದ ಮೂಲಕವೇ ಲಭ್ಯವಾಗುವಂತೆ ಕನ್ನಡ ಭಾಷೆಯನ್ನು ಸಜ್ಜುಗೊಳಿಸಬೇಕಾಗಿದೆ. ಇಂಥದ್ದೊಂದು ಸರಳವಾದ ಸಂಗತಿಯನ್ನು ಗ್ರಹಿಸುವ ರಾಜಕೀಯ ಇಚ್ಛಾಶಕ್ತಿಯನ್ನು ನಮ್ಮ ರಾಜಕೀಯ ಮುಖಂಡರಾಗಲೀ ಅವರನ್ನು ಆಯ್ಕೆ ಮಾಡುವ ಸಮುದಾಯಗಳಾಗಲೀ ಗ್ರಹಿಸದೇ ಇರುವುದು ಸೋಜಿಗದ ಸಂಗತಿಯಾಗಿದೆ.

ಈ ಘಟಿಕೋತ್ಸವದ ಸಂದರ್ಭದಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ ವಿವಿಧ ಪದವಿಗಳನ್ನು ಪಡೆದುಕೊಂಡ ವಿದ್ಯಾರ್ಥಿಗಳನ್ನು ಮೊದಲಿಗೆ ಅಭಿನಂದಿಸಿ ಅವರಿಗೆ ಶುಭವನ್ನು ಕೋರುತ್ತೇನೆ. ನಿಮ್ಮಲ್ಲಿ ಕೆಲವರು ಇನ್ನೂ ಹೆಚ್ಚಿನ ಅಧ್ಯಯನವನ್ನು ಆಯ್ಕೆ ಮಾಡಿಕೊಳ್ಳಬಹುದು. ಇನ್ನು ಬಹು ಸಂಖ್ಯೆಯವರು ವಾಸ್ತವ ಜಗತ್ತು ತೆರೆಯುವ ಅವಕಾಶಗಳನ್ನು ಗಳಿಸಿಕೊಳ್ಳಬಹುದು. ಆದರೆ ಒಂದು ಮಾತಂತೂ ನಿಜ. ಅದೇನೆಂದರೆ, ನೀವು ವಿವಿಧ ವಿಷಯಗಳಲ್ಲಿ ಶಿಕ್ಷಣ ಪಡೆದು, ಪದವಿಗಳನ್ನು ಗಳಿಸಿಕೊಂಡದ್ದು ನಿಮ್ಮ ಕಲಿಕೆಯ ಕೊನೆಯೂ ಅಲ್ಲ, ನಿಲುಗಡೆಯೂ ಅಲ್ಲ; ನಿಮ್ಮ ಕಲಿಕೆಯ ಪ್ರಾರಂಭ. ಜಟಿಲ-ಕುಟಿಲವಾದ ವಾಸ್ತವ ಜಗತ್ತೇ ಇನ್ನು ಮುಂದಿನ ನಿಮ್ಮ ವಿಶ್ವವಿದ್ಯಾನಿಲಯ. ಬದುಕಿನ ಉದ್ದಕ್ಕೂ ಕಲಿಕೆಯ ಅಥವಾ ವಿದ್ಯಾರ್ಥಿಯ ಮನೋಧರ್ಮವನ್ನು ಉಳಿಸಿಕೊಳ್ಳುವುದಿದೆಯಲ್ಲ, ಅದಕ್ಕಿಂತ ಮಹತ್ವದ್ದು ಬೇರೊಂದಿಲ್ಲ. ಇನ್ನು ಮುಂದೆ ಬುದ್ಧ ಹೇಳಿದ ಹಾಗೆ, 'ನಿಮಗೆ ನೀವೇ ದಾರಿದೀಪಗಳು'.

ಸ್ನೇಹಿತರೇ, ನಾವೂ ನೀವೂ ಬದುಕುತ್ತಿರುವ ಭಾರತೀಯ ಸಂದರ್ಭದ ಸಮಕಾಲೀನ ಜಗತ್ತು ಮಾನವೀಯ ಸಂಬಂಧಗಳು ವಿಘಟನೆಗೊಂಡ ಜಗತ್ತು; ಪರಿಸರ ನಾಶದ ತಲ್ಲಣಗಳಿಂದ ಮಲಿನಗೊಳ್ಳುತ್ತಿರುವ ಜಗತ್ತು; ಪ್ರತಿಯೊಂದನ್ನೂ ಮಾರುಕಟ್ಟೆಯ ಮಾಲನ್ನಾಗಿ ಪರಿವರ್ತಿಸಿ ತಕ್ಕಡಿಯಲ್ಲಿ ತೂಗುವ ಜಗತ್ತು; ಮನುಷ್ಯರನ್ನು ಹಿಡಿದು ಕೂಡಿಸಬೇಕಾದ ಮತ-ಧರ್ಮಗಳು ಧುತ್ತೆಂದು ಅಡ್ಡಗೋಡೆಗಳಾಗಿ ನಿಲ್ಲುವ ಜಗತ್ತು; ಮನುಷ್ಯರನುನ ಹಿಡಿದು ಕೂಡಿನಬೇಕಾದ ಮತ-ಧರ್ಮಗಳ ಧುತ್ತೆಂದು ಅಡ್ಡಗೋಡೆಗಳಾಗಿ ನಿಲ್ಲುವ ಜಗತ್ತು; ಲೋಕಕ್ಕೇ ಮಾರ್ಗದರ್ಶಕವಾಗಬಲ್ಲ ಮಹತ್ವದ ಚಿಂತನೆಗಳ ಒಂದು ಸುದೀರ್ಘ ಪರಂಪರೆಯಿದ್ದೂ ಅದಕ್ಕೂ ನಮಗೂ ಇರಬೇಕಾದ ಸಂಬಂಧವನ್ನು ಕಳಚಿಕೊಂಡು ಭ್ರಷ್ಟವಾದ ಜಗತ್ತು; ವಿಜ್ಞಾನ ತಂತ್ರಜ್ಞಾನಗಳ ಅದ್ಭುತವಾದ ಪ್ರಗತಿಯ ನಡುವೆಯೂ ಅವೈಚಾರಿಕತೆ ಮೂಢನಂಬಿಕೆಗಳು ಬದುಕನ್ನು ಇನ್ನೂ ಗುತ್ತಿಗೆ ಹಿಡಿದುಕೊಂಡ ಜಗತ್ತು; ಸಂವಿಧಾನ ಆಶಯಗಳಿಗೆ ವಿರುದ್ಧವಾದ ರೀತಿಯಲ್ಲಿ ಸಮಾಜದ ಮೇಲುವರ್ಗದವರಿಂದ ಕೆಳವರ್ಗದವರ ಮೇಲೆ ನಿರಂತರವಾಗಿ ನಡೆಯುತ್ತಿರುವ ಶೋಷಣೆಗಳ ಜಗತ್ತು; ಸರ್ವೋದಯ ಕನಸು ಕಂಡ ಮಹಾತ್ಮಾಗಾಂಧಿಯವರನ್ನು ಬಿಟ್ಟು ಬಹುದೂರ ಬಂದಿರುವ ಹಿಂಸಾರಭಸಮತಿಯಾದ ಜಗತ್ತು.

ಈಗ ಪ್ರಸ್ತಾಪಿಸಿದ ಕೆಲವು ಆತಂಕಗಳನ್ನು ವಿಸ್ತರಿಸಿ ಹೇಳುವುದಾದರೆ, ಅಭಿವೃದ್ಧಿಶೀಲತೆಯ ಹೆಸರಿನಲ್ಲಿ ನಾವು ಅನುಭವಿಸುತ್ತಿರುವ ಪರಿಸರ ನಾಶದ ತಲ್ಲಣಗಳಿಗೆ ಕೊನೆಯಿಲ್ಲವಾಗಿದೆ. ಈ ದೇಶ ಸ್ವತಂತ್ರವಾದ ಮೇಲೆ ಗಾಂಧೀಜಿ ಕನಸು ಕಂಡ ಗ್ರಾಮಕೇಂದ್ರಿತವೂ ಸರ್ವೋದಯ ಮೂಲವೂ ಆದ ಅಭಿವೃದ್ಧಿ ಯೋಜನೆಗಳು ಮೂಲೆಗುಂಪಾಗಿ, ಪಾಶ್ಚಾತ್ಯ ತಂತ್ರವಿಜ್ಞಾನ ಮೂಲವಾದ ಯೋಜನೆಗಳು ಜಾರಿಗೆ ಬಂದ ಕಾರಣದಿಂದ, ಈ ದೇಶ ಸಾಕಷ್ಟು ಪ್ರಗತಿಯನ್ನು ಸಾಧಿಸಿದಂತೆ ಮೇಲುನೋಟಕ್ಕೆ ಕಂಡರೂ ಈ ಮಾದರಿಯ ಯೋಜನೆಗಳಿಂದ ನಮ್ಮ ಪರಿಸರದ ಮೇಲೆ ಹಾಗೂ ಅದನ್ನವಲಂಬಿಸಿದ ಅರಣ್ಯ ಸಂಸ್ಕೃತಿಯ ಮೇಲೆ ಆಗಿರುವ ಮತ್ತು ಆಗುತ್ತಿರುವ ದುಷ್ಪರಿಣಾಮಗಳು ಗಾಬರಿಗೊಳಿಸುವಂತಿವೆ. ಮನುಷ್ಯ ಒಂದು ಕಾಲಕ್ಕೆ ನಿಸರ್ಗದೊಂದಿಗೆ ಬೆಳೆಯಿಸಿಕೊಂಡ ಪ್ರೀತಿಯ, ಆರಾಧನೆಯ ಪ್ರಾಣಮಯ ಸಂಬಂಧವನ್ನು ಕಡಿದುಕೊಂಡು, ಅದೊಂದು ಕೇವಲ ತನ್ನ ಉಪಭೋಗದ ವಸ್ತು ಎಂಬಂತೆ ನೋಡುವ ನಿಲುವಿಗೆ ಬಂದಿರುವುದು ಒಂದು ದುರಂತದ ಸಂಗತಿಯಾಗಿದೆ. ಗಾಂಧಿ ಹೇಳಿದರು, 'ಈ ಭೂಮಿ ಪ್ರತಿಯೊಬ್ಬರ ಅಗತ್ಯವನ್ನು ಪೂರೈಸಬಲ್ಲದು, ಆದರೆ ದುರಾಸೆಯನ್ನಲ್ಲ' ಎಂದು.

ಆದರೆ ಇಂದಿನ ವಿಜ್ಞಾನಯುಗದಲ್ಲಿ ಮನುಷ್ಯ ಪ್ರಗತಿಯ ಹೆಸರಿನಲ್ಲಿ ಈ ನೆಲದ ಸಂಪತ್ತನ್ನು ದುರಾಸೆಯಿಂದ ಲೂಟಿ ಮಾಡುತ್ತಿದ್ದಾನೆ. ಇಂದು ನಮ್ಮ ಸಂದರ್ಭದಲ್ಲಿ ಅಧಿಕೃತವಾಗಿ ಮತ್ತು ಅನಧಿಕೃತವಾಗಿ ದೇಶಾದ್ಯಂತ ನಡೆಯುತ್ತಿರುವ ಗಣಿಗಾರಿಕೆ ನಿಸರ್ಗದ ಮೇಲೆ ನಮ್ಮ ಕಣ್ಣೆದುರಿಗೇ ನಡೆಯುತ್ತಿರುವ ಅತ್ಯಾಚಾರಕ್ಕೆ ಸಾಕ್ಷಿಯಾಗಿದೆ. ನಮ್ಮ ಕವಿಗಳು, ಕಲಾವಿದರು, ಶ್ರೀ ಸಾಮಾನ್ಯರು ಉತ್ಕಟವಾಗಿ ಪ್ರೀತಿಸಿದ ನಿಸರ್ಗ ಇಂದು ಕೇವಲ ಮಾರುಕಟ್ಟೆಯ ವಸ್ತುವಾಗಿದೆ. ಹೀಗಾಗಿ ನಾವು ತಿನ್ನುವ ಅನ್ನ ಕುಡಿಯುವ ನೀರು, ಉಸಿರಾಡುವ ಗಾಳಿ ಎಲ್ಲವೂ ಮಲಿನವಾಗಿದೆ. ಈ ಹಿನ್ನೆಲೆಯಲ್ಲಿ ನಿಸರ್ಗವನ್ನು ಪ್ರೀತಿಸುವುದು ಬಹುದೊಡ್ಡ ಮೌಲ್ಯ ಎಂಬುದನ್ನು ಮರೆತಿದ್ದೇವೆ. ನಿಸರ್ಗ ಪ್ರೀತಿ ಎನ್ನುವುದು ಜೀವನ ಪ್ರೀತಿಯ ವಿಸ್ತರಣೆ ಎಂಬ ಪ್ರಥಮ ಪಾಠವನ್ನು ನಮ್ಮ ಮಕ್ಕಳಿಗೆ ಹೇಳಿಕೊಡಬೇಕಾಗಿದೆ. ಏಕೆಂದರೆ ಒಂದು ಗಿಡವನ್ನು, ಮರವನ್ನು, ಹೂವನ್ನು, ಹಕ್ಕಿಯನ್ನು, ಗುಡ್ಡವನ್ನು, ಬೆಟ್ಟವನ್ನು ಹರಿಯುವ ಹೊಳೆಯನ್ನು ಪ್ರೀತಿಸಲಾರದವನು ಮನುಷ್ಯರನ್ನು ಪ್ರೀತಿಸಲು ಹೇಗೆ ಸಾಧ್ಯ ? ನಮ್ಮ ಮುಂದಿರುವ ಸವಾಲು ಯಾವುದೆಂದರೆ ನಿಸರ್ಗವನ್ನು ನಿರ್ದಯವಾಗಿ ಕೊಳ್ಳೆಹೊಡೆಯುವುದೇ ಪ್ರಗತಿ ಎಂದು ತಿಳಿದ ಈ ದಿನಗಳಲ್ಲಿ ನಿಸರ್ಗ ಸಂರಕ್ಷಣೆಯನ್ನೂ ಅಭಿವೃದ್ಧಿಶೀಲತೆಯನ್ನೂ ಹೊಂದಿಸಿಕೊಂಡು ಹೋಗುವುದು ಹೇಗೆ ಎನ್ನುವುದೇ ಆಗಿದೆ. ಈ ಕುರಿತು ಗಂಭೀರವಾಗಿ ಯೋಚಿಸಬೇಕಾಗಿದೆ.

ಕಳೆದೆರಡು ಶತಮಾನಗಳಲ್ಲಿ ಮನುಷ್ಯನಿಗೆ ಲಭ್ಯವಾದಷ್ಟು ವಿಜ್ಞಾನದ ತಿಳಿವಳಿಕೆ ಬೇರಾವ ಕಾಲದಲ್ಲೂ ಲಭ್ಯವಾಗಿರಲಿಲ್ಲ. ಅದರಲ್ಲಿಯೂ ವಿಜ್ಞಾನ ತಂತ್ರಜ್ಞಾನ ಕ್ಷೇತ್ರದಲ್ಲಿ ಈ ದೇಶ ಅನೂಹ್ಯವಾದ ಪ್ರಗತಿಯನ್ನು ಸಾಧಿಸಿದರೂ ಭಾರತದ ಜನಮನಸ್ಸು ವೈಚಾರಿಕತೆಯ ಬೆನ್ನೆಲುಬಾದ ವೈಜ್ಞಾನಿಕ ಮನೋಧರ್ಮವನ್ನು ನಿರೀಕ್ಷಿತ ಪ್ರಮಾಣದಲ್ಲಿ ಬೆಳೆಯಿಸಿಕೊಳ್ಳಲು ಸಾಧ್ಯವಾಗದೆ ಹಳೆಯ ಹಾಗೂ ಹೊಸ ಮೂಢನಂಬಿಕೆಗಳಲ್ಲಿ ಸ್ಥಗಿತಗೊಂಡಿದೆ. ಪ್ರತಿಯೊಂದಕ್ಕೂ ಪಂಚಾಂಗವನ್ನು ನೋಡುವ ಪ್ರವೃತ್ತಿಯಿಂದ ಯಾವ ಪ್ರಗತಿಯೂ ಸಾಧ್ಯವಿಲ್ಲ. ಜತೆಗೆ ಮನುಕುಲದ ಪ್ರಗತಿಗೆ ನೆರವಾಗಬೇಕಾದ ವಿಜ್ಞಾನವು ಈ ದಿನ ಹಿಂಸೆಯ ಉಪಕರಣವಾಗಿ ಬಳಕೆಯಾಗುತ್ತಿರುವುದು ಒಂದು ವಿಪರ್ಯಾಸವಾಗಿದೆ. ಒಂದೆಡೆ ವೈದ್ಯವಿಜ್ಞಾನವು ತನ್ನ ಪವಾಡ ಸದೃಶವಾದ ಜೀವ ಸಂರಕ್ಷಕ ಸಂಶೋಧನೆಗಳಿಂದ ಮನುಷ್ಯನ ಆಯುಷ್ಯವನ್ನು ಗಣನೀಯವಾಗಿ ವಿಸ್ತರಿಸುವ ಕಾರ್ಯದಲ್ಲಿ ತೊಡಗಿದ್ದರೆ, ಮತ್ತೊಂದೆಡೆ ಸಹಸ್ರಾರು ಜನಗಳನ್ನು ನಿಮಿಷಾರ್ಧದಲ್ಲಿ ನಿರ್ನಾಮ ಮಾಡಬಲ್ಲ ಶಸ್ತ್ರಾಸ್ತ್ರಗಳ ಸಂಶೋಧನೆಗೆ ಸರ್ಕಾರಗಳು ರಾಶಿ ರಾಶಿ ಹಣವನ್ನು ಚೆಲ್ಲುತ್ತಿವೆ. ಇಪ್ಪತ್ತನೆಯ ಶತಮಾನದಲ್ಲಿ ಈ ಜಗತ್ತು ಕಂಡಷ್ಟು ಹಿಂಸೆಯನ್ನು ಅದು ಬೇರಾವ ಕಾಲಘಟ್ಟದಲ್ಲಿಯೂ ಕಂಡಿರಲಿಲ್ಲ. ಬುದ್ಧ ಮತ್ತು ಯುದ್ಧ ಎರಡೂ ಶಾಂತಿ ಮತ್ತು ಹಿಂಸೆಗಳ ಪ್ರತೀಕಗಳಾಗಿ ಮನುಕುಲದ ಎದುರು ಯಾವತ್ತಿನಿಂದಲೋ ನಿಂತಿವೆ. ಇವುಗಳಲ್ಲಿ ಚರಿತ್ರೆಯ ಆಯ್ಕೆ ಯಾವುದೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ನಾಗರಿಕತೆಯಲ್ಲಿ ಮನುಷ್ಯಜಾತಿ ಮುಂದುವರಿದಂತೆ, ಹಿಂಸೆಗೆ ಅದು ಕಂಡುಕೊಳ್ಳುವ ಕಾರಣಗಳು ಮತ್ತು ಬಳಸುವ ಉಪಕರಣಗಳು ಬದಲಾಗಿವೆಯೇ ಹೊರತು ಅದರ ಹಿಂದಿರುವ ಮನಸ್ಸು ಅಷ್ಟೇನೂ ಬದಲಾದಂತೆ ತೋರುವುದಿಲ್ಲ. ಈ ಚರಿತ್ರೆಯ ಮುಂದುವರಿದ ಭಾಗವಾದ ಇಂದಿನ ಹಿಂಸಾರಭಸಮತಿಯಾದ ಜಗತ್ತಿನಲ್ಲಿ ಸಂಭವಿಸುತ್ತಿರುವ ತಲ್ಲಣಗಳಿಗೆ ನಮ್ಮ ದೇಶದ ಸೃಜನಶೀಲತೆ ಹಾಗೂ ವೈಚಾರಿಕತೆಗಳು ಹೇಗೆ ಪ್ರತಿಕ್ರಿಯಿಸುತ್ತಿವೆ ಎನ್ನುವುದು ತುಂಬಾ ಕುತೂಹಲದ ವಿಷಯವಾಗಿದೆ. ಮುಖ್ಯವಾಗಿ ಕಳೆದ ಎರಡು ದಶಕಗಳಲ್ಲಿ ನಮ್ಮ ಈ ಪುಣ್ಯಭೂಮಿ ಭಾರತವೂ ಸೇರಿದಂತೆ, ಈ ಜಗತ್ತು ಕೋಮುವಾದಿಗಳು ಮತ್ತು ಭಯೋತ್ಪಾದಕರಿಂದ ಅಮಾನವೀಯವಾದ ಸಂಘರ್ಷ ಮತ್ತು ಹಿಂಸೆಗೆ ಒಳಗಾಗಿದೆ. ಈ ದೇಶ ಅದು ಹೇಗೋ ಬಹುಕಾಲದಿಂದ ಕಾಪಾಡಿಕೊಂಡು ಬಂದ ಕೋಮು ಸಾಮರಸ್ಯದ ಆಕೃತಿಗಳು, ಧರ್ಮ ಮತ್ತು ರಾಜಕಾರಣದ ಅಪವಿತ್ರ ಮೈತ್ರಿಯಿಂದ ಚೂರು ಚೂರಾಗುತ್ತಿರುವುದನ್ನು ನಾವು ಅಸಹಾಯಕರಾಗಿ ವೀಕ್ಷಿಸುವ ಪರಿಸ್ಥಿತಿಗೆ ಒಳಗಾಗಿದ್ದೇವೆ. ಸ್ವಾಮಿ ವಿವೇಕಾನಂದರು ಹೇಳಿದರು, ನಿಜವಾದ ಮನುಷ್ಯನನ್ನು ನಿರ್ಮಾಣ ಮಾಡುವ ಸತ್ವವೇ ಧರ್ಮ - Religion is Man Making - ಎಂದು. ಆದರೆ ಈ ಹೊತ್ತಿನ ಮನುಷ್ಯ ಏನಾಗಿದ್ದಾನೆ ? ಈ ಮನುಷ್ಯ ಜಡ ಸಂಪ್ರದಾಯಗಳಲ್ಲಿ ಸ್ಥಗಿತಗೊಂಡಿದ್ದಾನೆ; ಅರ್ಥಹೀನ ಆಚಾರಗಳ ಸೀಗೆಮೆಳೆಯಲ್ಲಿ ಸಿಕ್ಕಿಕೊಂಡಿದ್ದಾನೆ; ಮತ-ಧರ್ಮಗಳ ಕಾರಣದಿಂದ

ವಿಭಜನೆಗೊಂಡಿದ್ದಾನೆ. ಈ ಎಲ್ಲ ಉಪಾಧಿಗಳನ್ನು ಮೀರಿದ ನಿಶ್ಚಿತವಾದ ಮುಕ್ತ ಪ್ರಜ್ಞೆಯ ನೆಲೆಯಲ್ಲಿ ಈ ಮನುಷ್ಯನನ್ನು ಪ್ರತಿಷ್ಠಾಪಿಸುವುದು ಹೇಗೆ ಎನ್ನುವುದು ಈ ಹೊತ್ತಿನ ಪ್ರಶ್ನೆಯಾಗಿದೆ. ದುರದೃಷ್ಟದ ಸಂಗತಿಯೆಂದರೆ, ಸಾಮಾಜಿಕ ಅಸಮಾನತೆ, ಶೋಷಣೆ, ಭ್ರಷ್ಟಾಚಾರ ಇತ್ಯಾದಿಗಳಿಗೆ ಸಹಜವಾಗಿ ಪ್ರತಿಕ್ರಿಯಿಸುವ ನಮ್ಮ ಸಮೂಹ ಪ್ರಜ್ಞೆಯು ಮತ-ಧರ್ಮ-ರಾಜಕಾರಣ ಸಂಬಂಧದ ಕೋಮುವಾದಿ ಸ್ವರೂಪದ ಹಿಂಸೆಗಳನ್ನು ಕುರಿತು ಪ್ರತಿಕ್ರಿಯಿಸುವ ಸಂದರ್ಭದಲ್ಲಿ ತಳೆಯುವ ಹಿಂಜರಿಕೆ ಮತ್ತು ವಿಭಿನ್ನ ನಿಲುವುಗಳ ಹಿಂದಿರುವ ಕಾರಣಗಳು ತುಂಬ ಸೂಕ್ಷ್ಮವಾಗಿವೆ. ಆದರೂ ತಾವು ನಿಂತ ನೆಲಗಳನ್ನು ಮೀರಬಲ್ಲ ವಿಚಾರವಂಥ ಸಂಘಟಿತ ಮನಸ್ಸುಗಳಿಂದ ಈ ಹಿಂಸಾ ಪ್ರವೃತ್ತಿಗಳ ಹಿಂದಿರುವ ಹುನ್ನಾರಗಳನ್ನು ಬಯಲಿಗೆಳೆಯುವ, ಅವುಗಳ ರಾಜಕೀಯ ಮುಖಗಳನ್ನು ವಿರೋಧಿಸುವ ಮತ್ತು ಚರಿತ್ರೆಯನ್ನು ಆರೋಗ್ಯಪೂರ್ಣವಾಗಿ ವ್ಯಾಖ್ಯಾನಿಸುವ ಪ್ರಯತ್ನಗಳು ಕ್ರಿಯಾಶೀಲವಾಗಿವೆ ಎನ್ನುವುದು ಸಮಾಧಾನದ ಸಂಗತಿಯಾಗಿದೆ.

ಮನುಷ್ಯನ ವ್ಯಕ್ತಿತ್ವ ನಿರ್ಮಾಣದಲ್ಲಿ ಪ್ರಮುಖ ಪಾತ್ರ ವಹಿಸಬೇಕಾದ ನಮ್ಮ ಶಿಕ್ಷಣವು ಇದುವರೆಗೂ ಇದ್ದ ತನ್ನ ಕನಸುಗಳನ್ನು ಕಳೆದುಕೊಂಡಿದೆ. ಶಿಕ್ಷಣವು ನಮ್ಮ ಬದುಕಿಗೆ ಸಹಕಾರಿಯಾಗುವುದರ ಜತೆಗೆ ನಮ್ಮ ಅಂತರಂಗವನ್ನು ಅರಳಿಸುವ ಸಾಧನವೂ ಆಗಬೇಕು ಎನ್ನುವ ಉದ್ದೇಶವೇ ಹಿಂದೆ ಸರಿದು, ಅದು ಹಣ ಸಂಪಾದನೆಯೊಂದೇ ಶಿಕ್ಷಣದ ಪರಮಾರ್ಥ ಎನ್ನುವ ನಿಲುವಿನಲ್ಲಿ ಸ್ಥಗಿತಗೊಂಡಿದೆ. ನವ ವಸಾಹತುಶಾಹಿ ಸಂದರ್ಭದ ಮಾಹಿತಿ ತಂತ್ರಜ್ಞಾನದ ಆಕರ್ಷಣೆಯ ಭರಾಟೆಯಲ್ಲಿ ಇಂಜಿನಿಯರಿಂಗ್, ಮೆಡಿಕಲ್, ಬಯೋಟೆಕ್ನಾಲಜಿ, ಕಂಪ್ಯೂಟರ್ ವಿಜ್ಞಾನ - ಇತ್ಯಾದಿಗಳು ಎಲ್ಲಿಲ್ಲದ ಪ್ರಾಧಾನ್ಯವನ್ನು ಪಡೆದುಕೊಂಡಿವೆ. ಅದರಲ್ಲೂ ಲಕ್ಷಾಂತರ ರೂಪಾಯಿ ಸಂಬಳ ತರುವ ಬಹುರಾಷ್ಟ್ರೀಯ ಕಂಪನಿಗಳಲ್ಲಿ ಉದ್ಯೋಗಕ್ಕೆ ದಾರಿಯಾಗುವಂತಹ ಶಿಕ್ಷಣವೇ ಶಿಕ್ಷಣ, ಆ ಬಗೆಯ ಶಿಕ್ಷಣವನ್ನು ಪಡೆದವರೇ ಬುದ್ಧಿವಂತರು ಎನ್ನುವ ಭ್ರಮೆಯನ್ನು ಬಿತ್ತಲಾಗಿದೆ. ಈ ಪರಿಸ್ಥಿತಿಯಲ್ಲಿ ಕಲೆ, ಮೂಲವಿಜ್ಞಾನ, ಸಮಾಜವಿಜ್ಞಾನ, ಮಾನವಿಕಗಳು ನಿರ್ಲಕ್ಷ್ಯಕ್ಕೆ ಗುರಿಯಾಗಿವೆ. ಈ ಬಗೆಯ ವಾತಾವರಣದಲ್ಲಿ ನಿಜವಾದ ವಿಜ್ಞಾನಿಗಳಾಗಲಿ, ಕವಿಗಳಾಗಲಿ, ಕಲಾವಿದರಾಗಲಿ ಸಂಭವಿಸುವುದಾದರೂ ಹೇಗೆ ? ನಮ್ಮ ಸಾಮಾಜಿಕ ಸಂದರ್ಭದಲ್ಲಿ ಬೇರೆ ಬೇರೆಯ ಉದ್ಯೋಗಗಳಲ್ಲಿ ತೊಡಗಿಕೊಂಡವರ ಆದಾಯದ ನಡುವೆ ಕಾಣಿಸಿಕೊಳ್ಳುತ್ತಿರುವ ಅಪಾರ ಅಂತರವನ್ನು ಸರಿಪಡಿಸುವತನಕ ಈ ಸಮಸ್ಯೆಗೆ ಪರಿಹಾರವಿಲ್ಲವೆಂದೇ ತೋರುತ್ತದೆ. ಅದರಲ್ಲೂ ದೈಹಿಕ ಶ್ರಮವನ್ನು ಬಯಸುವ ದುಡಿಮೆಗೆ ಸ್ವಲ್ಪವಾದರೂ ಗೌರವವಾಗಲೀ ವರಮಾನವಾಗಲೀ ಸಿಗುತ್ತಿಲ್ಲ. ಹಾಗೆಯೇ ಹಣ ಮತ್ತು ಕುಶಲತೆಯನ್ನು ಬಂಡವಾಳವನ್ನಾಗಿ ತೊಡಗಿಸಿಕೊಂಡು ಅಪಾರವಾದ ಲಾಭವನ್ನು ಗಳಿಸಬಹುದಾದ ವಾಣಿಜ್ಯ ವ್ಯವಸ್ಥೆಯಿರುವವರೆಗೆ ಈ ಅರ್ಥಕೇಂದ್ರಿತ ಸಂಸ್ಕೃತಿಯಿಂದ ಬಿಡುಗಡೆಯಿಲ್ಲವೆಂಬಂತೆ ತೋರುತ್ತದೆ.

ಇಂದಿನ ಸಂದರ್ಭದಲ್ಲಿ ಜನರ ಬದುಕನ್ನು ಏರ್ಪಡಿಸುವ ಕಾರ್ಯದಲ್ಲಿ ಸೃಜನಶೀಲವಾದ ಪಾತ್ರವನ್ನು ವಹಿಸಬೇಕಾದ ವಿವಿಧ ಮಾಧ್ಯಮಗಳು ವಾಣಿಜ್ಯ ಸಂಸ್ಕೃತಿಯ ಇಕ್ಕಳದಲ್ಲಿ ಸಿಕ್ಕಿಕೊಂಡಿವೆ. ಇಂಥ ಕಡೆ ಕಲೆ ಎನ್ನುವುದು ಜಾಹೀರಾತುಗಳ ನಡುವಿನ ಮಧ್ಯಂತರವಾಗಿ ಬಿಡುತ್ತದೆ. ನಮ್ಮ ಬಹುತೇಕ ಮಾಧ್ಯಮಗಳು ರೋಚಕವಾದ ಸಂಗತಿಗಳಿಗೆ ಪ್ರಾಮುಖ್ಯವನ್ನು ಕೊಟ್ಟು ಸಾಂಸ್ಕೃತಿಕ ಮಹತ್ವದ ವಿಷಯಗಳನ್ನು ಕಡೆಗಣಿಸುವಂತೆ ತೋರುತ್ತದೆ. ಅದರಲ್ಲೂ ಬಹುತೇಕ ದೃಶ್ಯ ಮಾಧ್ಯಮಗಳು ಅಗ್ಗದ ಜನಪ್ರಿಯತೆಯ ಮನರಂಜನಾ ಸಂಸ್ಕೃತಿಯ ಪ್ರಸಾರಕ್ಕೆ ತಮ್ಮ ಸಾಕಷ್ಟು ಸಮಯವನ್ನು ವ್ಯಯ ಮಾಡುತ್ತವೆ. ಮಹಿಳೆಯರನ್ನು ಕೇವಲ ಮಾರಾಟದ ಸರಕಿನಂತೆ ಈ ಮಾಧ್ಯಮಗಳು ಬಳಸಿಕೊಳ್ಳುತ್ತಿರುವುದು ಸ್ತ್ರೀತ್ವದ ಘನತೆಗೆ ಮಾಡುತ್ತಿರುವ ಅಪಚಾರವೆಂದೇ ಹೇಳಬೇಕು. ಈ ಮಾಧ್ಯಮಗಳ ಮೂಲಕ ವಿವಿಧ ದೇಶಗಳ ಅಭಿರುಚಿಹೀನ ವಿಕಾರ ಸಂಸ್ಕೃತಿಗಳು ಪ್ರಸಾರವಾಗುತ್ತ ನಮ್ಮ ದೇಶೀಯ ಸಂಸ್ಕೃತಿಯನ್ನು ಧ್ವಂಸ ಮಾಡುತ್ತ ನಮ್ಮ ಸೃಜನಶೀಲತೆ ಹಾಗೂ ವೈಚಾರಿಕತೆಗಳಿಗೆ ಮಾರಕವಾಗಿವೆ. ವಾಸ್ತವವಾಗಿ ಕಲ್ಪನಾಸಮರ್ಥರೂ, ಸಾಂಸ್ಕೃತಿಕ ಕಾಳಜಿಗಳುಳ್ಳವರೂ, ವಿವೇಚನಾಶೀಲರೂ ಆದಂಥವರ ಕೈಗೆ ದೊರೆತರೆ ಮಹತ್ತರವಾದ ಸಾಮಾಜಿಕ ಪರಿವರ್ತನೆಯನ್ನು ತರಬಲ್ಲ ಈ ಮಾಧ್ಯಮಗಳು ಯಾರ್‍ಯಾರ ಕೈಗೋ ಸಿಕ್ಕು ಕೇವಲ ಮನರಂಜನಾ ಸಂಸ್ಕೃತಿಯನ್ನು ಬಿತ್ತಿಬೆಳೆಯುತ್ತಿವೆ.

ಈ ಹೊತ್ತು ಇಡೀ ಭಾರತದಲ್ಲಿ ಹಿಂದೆ ಇದ್ದಂಥ ಎತ್ತರದ ಮಾರ್ಗದರ್ಶಕ ವ್ಯಕ್ತಿತ್ವಗಳು ಒಂದೂ ಇಲ್ಲ. ನಮ್ಮ ಪ್ರಸ್ತುತ ರಾಜಕಾರಣವು ನಾಳಿನ ಭಾರತದ ಜವಾಬ್ದಾರಿಯನ್ನು ಹೊರಬೇಕಾದ ಇಂದಿನ ತರುಣರಿಗೆ ಯಾವ ಮೌಲ್ಯಾಧಾರಿತ ಮಾರ್ಗದರ್ಶನವನ್ನೂ ಒದಗಿಸಲಾರದಷ್ಟು ಭ್ರಷ್ಟವಾಗಿದೆ. ನಮ್ಮ ಬಹುತೇಕ ಸರ್ಕಾರಗಳು ಬಹುರಾಷ್ಟ್ರೀಯ ಕಂಪನಿಗಳನ್ನು ಕರೆದು ಮಣೆ ಹಾಕುವುದರಲ್ಲಿ ತೋರುತ್ತಿರುವ ಉತ್ಸಾಹ ಆಶ್ಚರ್ಯಕರವಾಗಿದೆ. ಜಾಗತೀಕರಣದ ಈ ನವ ವಸಾಹತುಶಾಹೀ ಕೇಂದ್ರಗಳು ಜಗತ್ತಿನ ಶೇಕಡಾ ಎಪ್ಪತ್ತರಷ್ಟು ವಾಣಿಜ್ಯವನ್ನು ತಮ್ಮ ತೆಕ್ಕೆಗೆ ತೆಗೆದುಕೊಂಡು, ಜಗತ್ತಿನ ಅರ್ಧದಷ್ಟು ಜನ ಅಂತರರಾಷ್ಟ್ರೀಯ ಬಡತನದ ರೇಖೆಯ ಕೆಳಗೆ ಬದುಕುವಂಥ ಪರಿಸ್ಥಿತಿಯನ್ನು ನಿರ್ಮಾಣಮಾಡಿವೆ. ನಮ್ಮ ದೇಶದ ಕೃಷಿ ಸಮಾಜವನ್ನು ಕೈಗಾರಿಕಾ ಸಮಾಜವನ್ನಾಗಿ ಪರಿವರ್ತಿಸುವ ಈ ವಿದ್ಯಮಾನಗಳಿಂದಾಗಿ ಲಕ್ಷಾಂತರ ಜನ ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಕಳೆದ ಆರೇಳು ವರ್ಷಗಳಲ್ಲಿ ಹೀಗೆ ಆತ್ಮಹತ್ಯೆಗೆ ಶರಣಾದ ರೈತರ ಸಂಖ್ಯೆ ಮೂವತ್ತು ಸಾವಿರ ಎಂದು ಹೇಳಲಾಗಿದೆ. ಜತೆಗೆ ರಾಷ್ಟ್ರವ್ಯಾಪಿಯಾದ ಭ್ರಷ್ಟಾಚಾರವು ಯಾರನ್ನೂ ದಿಗಿಲುಗೊಳಿಸುವಂತಿದೆ. ಅಷ್ಟೇ ಅಲ್ಲ, ಈ ಭ್ರಷ್ಟಾಚಾರವನ್ನು ಯಾವ ಹಿಂಜರಿಕೆಯೂ ಇಲ್ಲದೆ ಈ ದೇಶದ ಜನ, ಅದೂ ತಮ್ಮ ಬದುಕಿನ ಒಂದು ಭಾಗ ಎಂದು ತಣ್ಣಗೆ ಒಪ್ಪಿಕೊಂಡಿದ್ದಾರಲ್ಲ ಎನ್ನುವುದು ಆಶ್ಚರ್ಯದ ಸಂಗತಿಯಾಗಿದೆ.

ಪ್ರಿಯ ತರುಣ ಮಿತ್ರರೆ, ಈವರೆಗೆ ನಾನು ಯಾವ ರೂಢಿಗತ ಉಪದೇಶದ ನಿಲುವನ್ನೂ ಆರೋಪಿಸಿಕೊಳ್ಳದೆ, ನಾವೆಲ್ಲರೂ ಬದುಕುತ್ತಿರುವ ಸಮಕಾಲೀನ ವಾಸ್ತವ ಜಗತ್ತಿನ ಕೆಲವು ಆತಂಕಗಳನ್ನು ಕುರಿತು ನಿಮ್ಮೊಂದಿಗೆ ನನ್ನ ಪ್ರತಿಕ್ರಿಯೆಗಳನ್ನು ಹಂಚಿಕೊಂಡಿದ್ದೇನೆ. ಹಾಗೆ ಮಾತನಾಡುವಾಗ ನಾವೂ ಈ ಅಸ್ವಸ್ಥ ಜಗತ್ತಿನ ಒಂದು ಭಾಗ ಎನ್ನುವುದನ್ನು ನಾನು ಮರೆತಿಲ್ಲ. ಏಕೆಂದರೆ ನಮ್ಮ ಸುತ್ತಣ ಜಗತ್ತು ಈಗ ಇರುವುದಕ್ಕಿಂತ ಇನ್ನಷ್ಟು ಸುಂದರವಾಗಿ, ಇನ್ನಷ್ಟು ಸುಖವಾಗಿ, ಇನ್ನಷ್ಟು ವೈಚಾರಿಕವಾಗಿ ರೂಪುಗೊಳ್ಳಬೇಕು ಎನ್ನುವುದು ಎಲ್ಲ ಕಾಲದ ಕಲಾವಿದರ ವಿಚಾರವಂತರ ಹೋರಾಟಗಾರರ ತುಡಿತವಾಗಿದೆ. ಆದರೆ ನಾವು ಬದಲಾಗದೆ, ಕೆಟ್ಟುಹೋಗಿದೆ ಎಂದು ಭಾವಿಸುವ ಈ ಜಗತ್ತು ಬದಲಾಗುವುದಿಲ್ಲ. ನಾವು ಬದಲಾಗಬೇಕೆಂಬ ಅರಿವಿಲ್ಲದೆ ಅಥವಾ ಇಷ್ಟವಿಲ್ಲದೆ, ಈ ಜಗತ್ತು ಬದಲಾಗಬೇಕೆಂದು ಘೋಷಿಸುವುದು ತೀರಾ ಅನೈತಿಕವಾದ ನಿಲುವಾಗುತ್ತದೆ. ಏಕೆಂದರೆ ನಾವು ಒಬ್ಬೊಬ್ಬರೂ ಈ ಜಗತ್ತಿನ ಒಂದು ಭಾಗ ಮತ್ತು ಈ ಬದುಕು ಹೀಗಿರುವುದಕ್ಕೆ ನಾವೂ ಕಾರಣ ಎನ್ನುವ ಪಾಪ ಪ್ರಜ್ಞೆ ನಮ್ಮನ್ನು ತೀವ್ರವಾಗಿ ಕಾಡಿದಾಗ ಮಾತ್ರ ಏನಾದರೂ ಬದಲಾವಣೆ ಆಗಲು ಸಾಧ್ಯ ಎಂದು ನಾನು ತಿಳಿದಿದ್ದೇನೆ.

ವಂದನೆಗಳು

□

**ಮೈಸೂರು ವಿಶ್ವವಿದ್ಯಾನಿಲಯದ ೮೮ನೆಯ ವಾರ್ಷಿಕ ಘಟಿಕೋತ್ಸವದ ಭಾಷಣ**

ಶ್ರೀ ಪುಸ್ತಕಮನೆ ಹರಿಹರಪ್ರಿಯ ಅವರಿಗೆ ಸಪ್ರೇಮ ವಂದನೆಗಳು

ಹದಿನೇಳನೆಯ ಸಂಚಿಕೆಗೆ 'ಪುಸ್ತಕಮನೆ' ಎಂದು ಮರು ನಾಮಕರಣಗೊಳಿಸಿದ್ದು ಸೂಕ್ತವೇ ಆಗಿದೆ. ಎಂತಿದ್ದರೂ ಅದು ಪುಸ್ತಕಮನೆಗೂ ಹರಿಹರಪ್ರಿಯನಿಗೂ ಇರುವ ಅವಿನಾಭಾವ ಸಂಬಂಧವನ್ನು ಸಾಬೀತುಪಡಿಸುಂಥದ್ದೇ. ಹಾಗೆಯೇ ಸದ್ರಿ ಸಂಚಿಕೆಯನ್ನು 'ವಿದ್ಯಾಸುಂದರಿ ಬೆಂಗಳೂರು ನಾಗರತ್ನಮ್ಮ ನೆನಪಿನ ಸಂಚಿಕೆ' ಯನ್ನಾಗಿ ರೂಪಿಸುವಲ್ಲಿ ಚರಿತ್ರೆಯ ಗುಂಡಿಯಿಂದ ಅಪರೂಪದ ವ್ಯಕ್ತಿತ್ವವೊಂದನ್ನು ಹುಡುಕಿ ಎತ್ತಿದ ನಿಮ್ಮ ಕಾಳಜಿ ಮೆಚ್ಚುವಂಥದ್ದೆ.

ಸನ್ನಿ ಹಿಡಿದಂತಿರುವ ಇವತ್ತಿನ ಸಾಂಸ್ಕೃತಿಕ ಲೋಕದಲ್ಲಿ 'ಒಂಟಿದನಿ'ಯಾಗಿ ಮೊಳಗುತ್ತ ಬಂದ ನಿಮ್ಮ ಶ್ರಮ ಸಾರ್ಥಕತೆ ಪಡೆಯುವ ಕಾಲ ಸನ್ನಿಹಿತವಾದಂತಾಗಿದೆ. ತಡವಾದರು ಚಿಂತೆಯಿಲ್ಲ, ಈಗ ನಾಡಿನ ಪ್ರಜ್ಞಾವಂತರೆಲ್ಲರ ಮನಸ್ಸು ತಾಗಬಲ್ಲ ಹೊಸ ಆಶಯವನ್ನು ಹುಟ್ಟಿಸಿದ್ದೀರಿ ಕೂಡ. ಇದು, ಹರಿಹರಪ್ರಿಯ ಎಲ್ಲರಿಗೂ ಹತ್ತಿರವಾಗುವ ಸೂಚನೆಯಾಗಿ ಕಾಣುತ್ತದೆ ನನಗೆ.

ಬೆಂಗಳೂರು

**ಈರಪ್ಪ ಎಂ. ಕಂಬಳಿ**

೨

# ಚಲನಶೀಲತೆಯ ಹೊಸದಿಕ್ಕುಗಳತ್ತ

## ಕಿ.ರಂ. ನಾಗರಾಜ

ಕನ್ನಡ ಪ್ರೀತಿಯ ಎಲ್ಲ ಹಿರಿಯರೆ, ಸ್ನೇಹಿತರೇ,

ನಿಮಗೆಲ್ಲರಿಗೂ ಪ್ರೀತಿಯ ನಮಸ್ಕಾರಗಳು. ನನ್ನನ್ನು ಹಾಸನ ಜಿಲ್ಲೆಯ ಒಂಬತ್ತನೆಯ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಅಧ್ಯನಾಗಬೇಕೆಂದು ಪ್ರೀತಿಯಿಂದ ಆಯ್ಕೆ ಮಾಡಿದ್ದೀರಿ. ಇದಕ್ಕಾಗಿ ಮೊದಲಿಗೆ ಜಿಲ್ಲೆಯ ಸಾಹಿತ್ಯ ಪರಿಷತ್ತಿನ ಎಲ್ಲ ಪದಾಧಿಕಾರಿಗಳಿಗೂ, ಸಾಹಿತ್ಯ ಪರಿಷತ್ತಿನ ಸದಸ್ಯರಿಗೂ, ಜಿಲ್ಲೆಯ ಎಲ್ಲ ಸಾಹಿತ್ಯಾಸಕ್ತರಿಗೂ ನನ್ನ ಪ್ರೀತಿಪೂರ್ವಕ ವಂದನೆಗಳು.

ನಾನೊಬ್ಬ ಸಾಹಿತ್ಯದ ವಿದ್ಯಾರ್ಥಿ. ಕನ್ನಡ ಸಾಹಿತ್ಯವನ್ನು ಕುರಿತು ಪ್ರೀತಿಯಿಂದ ವಿದ್ಯಾರ್ಥಿಗಳು ಹಾಗೂ ಆಸಕ್ತರೊಂದಿಗೆ ಸಂವಾದಿಸುವುದು ನನಗೆ ಪ್ರಿಯವಾದ ಕೆಲಸ. ನನ್ನ ಪಾಡಿಗೆ ನಾನು ಬರೆದುಕೊಂಡೋ, ಓದಿಕೊಂಡೋ ಇದ್ದವನನ್ನು ಈ ಸ್ಥಾನಕ್ಕೆ ತಂದು ನಿಲ್ಲಿಸಿದ್ದೀರಿ. ಇದೊಂದು ಹೊಣೆಗಾರಿಕೆ ಎಂದು ಭಾವಿಸಿ ನಿಮ್ಮೊಂದಿಗೆ ಕೆಲವು ವಿಚಾರಗಳನ್ನು ಹಂಚಿಕೊಳ್ಳುತ್ತಿದ್ದೇನೆ.

ಕನ್ನಡ ಭಾಷೆ, ಕನ್ನಡ ನಾಡಿನ ಪ್ರಗತಿ ನಮ್ಮೆಲ್ಲರ ಮುಖ್ಯ ಆಸಕ್ತಿ. ಈ ಹೊತ್ತು ನಮ್ಮ ಪ್ರಗತಿ ಅನೇಕ ಸಮಸ್ಯೆ, ಸವಾಲುಗಳ ಮಧ್ಯೆ ಸಾಗುತ್ತಿದೆ. ಆಧುನಿಕತೆಯ ಓಟ ತೀವ್ರಗತಿಯಲ್ಲಿ ಜಲಿಸುತ್ತಿರುವುದರಿಂದ ಅದಕ್ಕೆ ತಕ್ಕಂತೆ ನಮ್ಮ ಜೀವನ ವಿಧಾನ, ಪ್ರಗತಿಯ ರೂಪುರೇಷೆಗಳು ಬದಲಾಗುವುದು ಅನಿವಾರ್ಯವೂ ಆಗಿದೆ. ಇದಕ್ಕಾಗಿ ನಾಡಿನ ನಾವೆಲ್ಲರೂ ಒಗ್ಗೂಡಿ ಮುನ್ನಡೆಯಬೇಕಾಗಿದೆ. ಹೊಸ ತಂತ್ರಜ್ಞಾನ, ಸಂವಹನ ಕ್ಷೇತ್ರದಲ್ಲಿ ಕ್ಷಿಪ್ರವಾಗಿ ಆಗುತ್ತಿರುವ ಅವಸ್ಥಾಂತರಗಳಿಂದ ನಮ್ಮ ಭಾಷೆ, ಸಂಸ್ಕೃತಿಗಳ ವಿಷಯದಲ್ಲಿ ಅಸಂಖ್ಯ ಬಿಕ್ಕಟ್ಟುಗಳು ಸೃಷ್ಟಿಯಾಗಿವೆ. ಆತಂಕದ ವಾತಾವರಣದ ಮಧ್ಯೆ ಚಲನಶೀಲತೆಯ ಹೊಸ ದಿಕ್ಕುಗಳತ್ತ ಚಲಿಸುವ ಗಂಭೀರ ಸವಾಲುಗಳನ್ನು ನಾವು ಎದುರಾಗುವುದು ಅನಿವಾರ್ಯ ಕೂಡ ಆಗಿದೆ. ಐ.ಟಿ., ಬಿ.ಟಿ. ಮುಂತಾದ ನವ ತಾಂತ್ರಿಕ ಜಗತ್ತು ಹೊಸ ಶ್ರೇಣಿಗಳನ್ನು ಹುಟ್ಟುಹಾಕುತ್ತಿದೆ. ಆ ಶಕ್ತಿಗಳು ತಮ್ಮದೇ ಆದ ಶೈಲಿಯಲ್ಲಿ ಬುದ್ಧಿಮತ್ತೆಯ ಅಳತೆಗೋಲನ್ನು ನಿರ್ಮಿಸಿಕೊಂಡು ನಮ್ಮ ಯುವ ಸಮುದಾಯದ ಸಾಮರ್ಥ್ಯ, ಪ್ರತಿಭೆಗಳನ್ನೇ ಪ್ರಶ್ನಿಸುತ್ತಿವೆ. ಐರೋಪ್ಯ ಪ್ರಗತಿಯ ಮಾದರಿ, ಶಿಕ್ಷಣದ ಕ್ರಮಗಳು ನಮ್ಮನ್ನು ಆವರಿಸಿ ಇಡೀ ವಾತಾವರಣ ಯಾಂತ್ರಿಕವೂ, ಕೃತಕವೂ ಆಗಿ ಪರಿಣಮಿಸುತ್ತಿದೆ. ಹೊಸ ತಂತ್ರಜ್ಞಾನ ಸ್ಥಳೀಯ ಪ್ರತಿಭೆ, ಸಾಮರ್ಥ್ಯಗಳನ್ನು ಮೂಲೆಗುಂಪಾಗಿಸುವ ಹುನ್ನಾರಗಳನ್ನು ನೇಯುತ್ತಿದೆ. ಇದರಿಂದ ಪಾರಾಗದೆ, ಅದಕ್ಕೆ ತಕ್ಕ ಪ್ರತಿತಂತ್ರಗಳನ್ನು ರೂಪಿಸಿಕೊಳ್ಳದೆ ನಮ್ಮ ಅನನ್ಯತೆಯನ್ನು ಕಾಯ್ದುಕೊಳ್ಳಲು ಸಾಧ್ಯವಾಗುವುದಿಲ್ಲ. ಈ ದಿಕ್ಕಿನಲ್ಲಿ ನಾವು ಯೋಚಿಸುವುದರೊಂದಿಗೆ ಪರ್ಯಾಯ ನೆಲೆಗಳನ್ನು ನಿರ್ಮಿಸಿಕೊಳ್ಳಬೇಕಾಗಿದೆ. ಸ್ಥಳೀಯತೆಯ ಕೇಂದ್ರದಿಂದ ವಿಶ್ವಾತ್ಮಕ ನೆಲೆಯ ಕಡೆಗೆ ಚಲಿಸುವುದು ನಮ್ಮ ಗುರಿಯಾಗಬೇಕು. ನವ ತಂತ್ರಜ್ಞಾನಕ್ಕೆ ಸ್ಥಳೀಯ ಸಂಪನ್ಮೂಲಗಳು ಬೇಕು – ಆದರೆ ಅವಕ್ಕೆ ಸ್ಥಳೀಯ ನೆಲೆಗಳು ಗಟ್ಟಿಗೊಳ್ಳುವುದು ಬೇಡವಾಗಿದೆ. ಇಂಥ ವಿಷಮ ಪರಿಸ್ಥಿತಿಯಿಂದ ಬಿಡುಗಡೆ ಹೊಂದಲು ತಕ್ಕ ಸಮಗ್ರ ಚಿಂತನೆ ಹಾಗೂ ಹೊಸ ಪ್ರಯೋಗಗಳ ದಿಕ್ಕಿನತ್ತ ಚಲಿಸಬೇಕಾಗಿದೆ.

ಸಂಸ್ಕೃತಿಯ ಹೆಸರಿನಲ್ಲಿ ಅನೇಕ ಅರ್ಥರಹಿತ ಕಾರ್ಯಕ್ರಮಗಳನ್ನು ನಮ್ಮ ಎಲೆಕ್ಟ್ರಾನಿಕ್ ಮಾಧ್ಯಮಗಳು ಎಡೆಬಿಡದೆ ಪ್ರಸಾರ ಮಾಡುತ್ತಿರುವುದನ್ನು ನಾವೆಲ್ಲರೂ ಬಲ್ಲೆವು. ಇದನ್ನು ನಿಯಂತ್ರಿಸಲು ಸಾಧ್ಯವಿಲ್ಲದಂಥ ವಾತಾವರಣವನ್ನು ವಾಣಿಜ್ಯ ಸಂಸ್ಕೃತಿ ನಿರ್ಮಾಣ ಮಾಡುತ್ತಿದೆ. ವಾಣಿಜ್ಯ ಸಂಸ್ಕೃತಿಯು ನಮ್ಮ ಮಕ್ಕಳ ಮನಸ್ಸಿನ ಮೇಲೆ ಉಂಟು ಮಾಡುತ್ತಿರುವ ಪರಿಣಾಮಗಳನ್ನು ಊಹಿಸಲೂ ಸಾಧ್ಯವಿಲ್ಲ. ಇದಕ್ಕೆ ಎದುರಾಗಲು ಸೂಕ್ಷ್ಮತೆ ಹಾಗೂ ವಿಚಾರಪೂರ್ಣ ಸಾಹಿತ್ಯಕ ಸಂಸ್ಕೃತಿಯ ಅರ್ಥಪೂರ್ಣ ಬಳಕೆಯೇ ಮದ್ದು ಎಂಬುದನ್ನು ನಾವು

ತಿಳಿಯಬೇಕು. ಉದಾಹರಣೆಗೆ, 'ಹಾಸ್ಯ ಸಂಜೆ' ಮತ್ತು 'ಆದರ್ಶ ದಂಪತಿಗಳು'ವಿನಂಥ ಹಾಸ್ಯಾಸ್ಪದ ಕಾರ್ಯಕ್ರಮಗಳೊಂದಿಗೆ ಗೊರೂರು ರಾಮಸ್ವಾಮಿ ಅಯ್ಯಂಗಾರ್ಯರ ವಿನೋದದ ಪ್ರಬುದ್ಧ ಪ್ರಜ್ಞೆಯನ್ನು ಹೋಲಿಸಲಾದೀತೆ ? ಸಾಹಿತ್ಯದ ಸೂಕ್ಷ್ಮ ಓದು ನಮ್ಮ ಸುತ್ತ ಹಬ್ಬುತ್ತಿರುವ ಅಸಂಗತವೂ ಕೃತಕವೂ ಆದ ಪ್ರಭಾವದಿಂದ ಪಾರಾಗಲು ಸೂಕ್ತ ದಾರಿಯನ್ನು ತೋರುತ್ತದೆ.

ಈಗ ನಾವು ಆಚರಿಸುತ್ತಿರುವ ಕರ್ನಾಟಕದ ಏಕೀಕರಣದ ಸುವರ್ಣಹಬ್ಬ ನಿಜಕ್ಕೂ ಮಹತ್ವದ್ದೆನಿಸಬೇಕಾದರೆ ಈ ತನಕ ನಾವು ನಡೆದು ಬಂದ ದಾರಿಯ ಬಗೆಗೆ ವಿಮರ್ಶನ ದೃಷ್ಟಿಯಿಂದ ಪರಿಶೀಲಿಸಬೇಕಾಗಿದೆ. ಅಲ್ಲದೆ ನಮ್ಮ ಮುಂದಿನ ನಡೆಯನ್ನು ಕುರಿತು ಕ್ರಿಯಾಶೀಲ ಎಚ್ಚರದಿಂದ ಕಾರ್ಯಕ್ರಮಗಳನ್ನು ರೂಪಿಸಿ ಅದನ್ನು ಆಗುಮಾಡುವ ಅಗತ್ಯವಿದೆ. ಕನ್ನಡದ ಅಭಿವೃದ್ಧಿ ಕೇವಲ ಅಭಿಮಾನ, ಉತ್ಸವ, ನಮ್ಮ ಹಿರಿಮೆ, ಮಹಿಮೆಗಳನ್ನು ನಾವೇ ಸ್ತುತಿಸುತ್ತ, ಹೊಗಳಿಕೊಳ್ಳುತ್ತ ಬೀಗುವುದಲ್ಲ. ನಾವು ಯಾವ ಕ್ಷೇತ್ರದಲ್ಲಿ ದುಡಿಯುತ್ತಿದ್ದೇವೆಯೋ ಅಲ್ಲೆಲ್ಲ ಕನ್ನಡದ ವಾತಾವರಣವನ್ನು ನಿರ್ಮಾಣ ಮಾಡಬೇಕು. ಇದು ನಾವು ಭಾವಿಸಿಕೊಂಡಷ್ಟು ಸರಳವೂ, ನೇರವೂ ಅಲ್ಲ ಎಂಬುದನ್ನು ತಿಳಿದರೆ ಮಾತ್ರ ಕನ್ನಡದ ವಾತಾವರಣವನ್ನು ಸೃಷ್ಟಿಸಲು ಸಾಧ್ಯ. ಸಾಹಿತಿಗಳು, ರೈತರು, ಬೃಹತ್ ಉದ್ಯಮದ ಅಧಿಪತಿಗಳು, ದುಡಿಮೆಗಾರರು, ಸಾಮಾನ್ಯ ಹಳ್ಳಿಯಿಂದ ಹಿಡಿದು ಎಲ್ಲ ಮಟ್ಟಗಳಲ್ಲಿ ಕನ್ನಡ ಭಾಷೆ ಮತ್ತು ಸಂಸ್ಕೃತಿಯ ಜೀವಚೈತನ್ಯವನ್ನು ಹಬ್ಬಿಸಬೇಕಾಗಿದೆ. ಇದಕ್ಕೆ ತಕ್ಕ ಯೋಜನೆಗಳನ್ನೂ ರೂಪಿಸುವ ಅಗತ್ಯವಿದೆ. ಕನ್ನಡ ನಾಡಿನಲ್ಲಿ ಇರುವ ಕನ್ನಡಿಗರಷ್ಟೇ ಕನ್ನಡವನ್ನು ಮಾನ್ಯ ಮಾಡಿದರೆ ಸಾಲದು. ಕನ್ನಡ ನಾಡಿನಲ್ಲಿ ನೆಲೆಸಿರುವವರೆಲ್ಲರೂ ಕನ್ನಡ ಕಲಿತು ತಮ್ಮ ಜೀವನವನ್ನು ರೂಪಿಸಿಕೊಳ್ಳುವಂತೆ ಕನ್ನಡಿಗರು ಪ್ರೀತಿಯ ಒತ್ತಾಯ ತರುವಂತಾಗಬೇಕು. ಇದಕ್ಕೆ ತಕ್ಕ ರಾಜಕೀಯ ಇಚ್ಛಾಶಕ್ತಿಯನ್ನು ತೋರಲು ನಮ್ಮ ಸರ್ಕಾರ ಮುಂದಾಗಬೇಕು. ನೆಲ, ಜಲ, ಇತರ ಸಂಪನ್ಮೂಲಗಳು ಹಾಗೂ ಕನ್ನಡಿಗರ ದುಡಿಮೆಯ ಫಲಗಳನ್ನಷ್ಟೇ ಹೊರನಾಡಿನ ವಲಸಿಗರು ಅನುಭವಿಸಿ, ಇಲ್ಲಿನ ಭಾಷೆ ಹಾಗೂ ಸಂಸ್ಕೃತಿಗಳ ಬಗೆಗೆ ನಿರಾಸಕ್ತಿಯಿಂದ, ಸ್ವೇಚ್ಛೆಯಿಂದ ವರ್ತಿಸುವಂತಾಗಬಾರದು. ಕನ್ನಡಿಗರಾದ ನಾವು ನಮ್ಮ ಅನನ್ಯತೆಯನ್ನು ಉಳಿಸಿಕೊಳ್ಳಲು ಅನ್ಯರ ಸ್ವೇಚ್ಛೆಗೆ ಕಡಿವಾಣ ಹಾಕುವುದು ಅನಿವಾರ್ಯವಾಗಿದೆ.

ವಲಸಿಗರ ಸ್ವೇಚ್ಛೆಯ ನಡೆ ಬೆಂಗಳೂರಿನಂಥ ನಗರಗಳಲ್ಲಿ ಮಾತ್ರವಲ್ಲದೆ ನಾಡಿನ ಉದ್ದಗಲಕ್ಕೂ ಹಬ್ಬುತ್ತಿದೆ. ಇದೇ ಪರಿಸ್ಥಿತಿ ಮುಂದುವರೆದರೆ ನಮ್ಮ ಭಾಷಿಕ ಸಂಸ್ಕೃತಿ ಕ್ರಮೇಣ ಮೂಲೆಗುಂಪಾಗುವುದು ಖಂಡಿತ. ಈಗಾಗಲೇ ನಮ್ಮ ಸಮೂಹ ಮಾಧ್ಯಮಗಳು, ಜಾಹಿರಾತು, ಆರ್ಥಿಕ ವ್ಯವಹಾರ - ಇವೇ ಮೊದಲಾದವುಗಳು ಕನ್ನಡವನ್ನು ಕೇವಲ ಅಂಚಿನ ಭಾಷೆಯನ್ನಾಗಿ ಪರಿಗಣಿಸುತ್ತ ಬಂದಿವೆ. ಒಂದು ಕಾಲಕ್ಕೆ ಪಕ್ಕಾ ಕನ್ನಡ ಪರಿಸರವೆನಿಸಿದ್ದ ಹಾಸನ ಜಿಲ್ಲೆಯಂಥ ಕಡೆಗಳಲ್ಲಿಯೂ ಅನ್ಯಭಾಷೆಗಳು ಆಕ್ರಮಿಸುತ್ತಿರುವುದನ್ನು ನಾವು ಕಾಣುತ್ತಿದ್ದೇವೆ. ಇಂಥ ಸನ್ನಿವೇಶದಿಂದ ಹೊರಬರಲು ನಮ್ಮ ನಮ್ಮ ವಾತಾವರಣದಲ್ಲಿಯೇ ಸೂಕ್ತ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳಬೇಕಾದ ಅಗತ್ಯವಿದೆ. ನಮ್ಮ ಆಡಳಿತ ವ್ಯವಸ್ಥೆಯ ಮೇಲೆ ಒತ್ತಡವನ್ನು ತಂದು ಕನ್ನಡದ ಸರ್ವತ್ರ ಬಳಕೆಗೆ ಕನ್ನಡಿಗರನ್ನೂ ಒಳಗೊಂಡಂತೆ ಕರ್ನಾಟಕದಲ್ಲಿ ನೆಲೆ ನಿಂತಿರುವ ಕನ್ನಡೇತರರನ್ನೂ ಪ್ರೇರೇಪಿಸಬೇಕು. ಈ ಹೋರಾಟದ ಸ್ವರೂಪವನ್ನು ನಾವು ತೀವ್ರವಾದ ಕಾರ್ಯಕ್ರಮಗಳ ಮೂಲಕವೇ ರೂಪಿಸುವಂತಾಗಬೇಕು. ಅನ್ಯಪ್ರಾಂತ್ಯದ ವ್ಯಕ್ತಿ, ಸಮುದಾಯಗಳೊಂದಿಗೆ ನಾವು ಕನ್ನಡ ಭಾಷೆಯ ಮೂಲಕ ವ್ಯವಹರಿಸುವ ಪ್ರವೃತ್ತಿಯನ್ನು ಬೆಳೆಸಿಕೊಂಡರೆ ಅವರೂ ಪ್ರೀತಿಯಿಂದ ಕನ್ನಡವನ್ನು ಕಲಿಯಲು, ಬಳಸಲು, ಬೆಳೆಸಲು ಸಾಧ್ಯವಾಗುತ್ತದೆ.

ನಾವು ಈಗ ಪಾಲ್ಗೊಳ್ಳುತ್ತಿರುವ ಈ ಸಮಾವೇಶವನ್ನು ಸಾಹಿತ್ಯ ಸಮ್ಮೇಳನವೆಂದು ಕರೆಯುತ್ತಿದ್ದೇವೆ. ಇದು ಕೇವಲ ಸಾಹಿತ್ಯಕ್ಕೆ ಸೀಮಿತವಾದ ಸಮ್ಮೇಳನವಲ್ಲ. ಸಾಹಿತ್ಯವನ್ನು ಈ ಕಾಲದಲ್ಲಿ ನಿರ್ವಚಿಸುತ್ತಿರುವ ಸ್ವರೂಪದಲ್ಲೇ ಅನೇಕ ಪಲ್ಲಟಗಳಾಗಿಬಿಟ್ಟಿವೆ. ಸಾಹಿತ್ಯವನ್ನು ಸಾಹಿತ್ಯಕೇಂದ್ರಿತವಾಗಿ - ಸಾಹಿತ್ಯವೇ ಅಂತಿಮವೆಂಬ ದೃಷ್ಟಿಯಿಂದ ನೋಡುವುದು ಈ ಹೊತ್ತಿಗೆ ಸಲ್ಲುವುದಿಲ್ಲ. ಈ ಹಿಂದಿನ ಕಲ್ಪನೆಗಳನ್ನೆಲ್ಲಾ ಒಡೆದು ವಿಭಿನ್ನ ಚೌಕಟ್ಟುಗಳಲ್ಲಿ

ಸಾಹಿತ್ಯವನ್ನು ನೋಡುವ ವಿಧಿ-ವಿಧಾನಗಳು ಏರ್ಪಟ್ಟಿವೆ. ಸಾಹಿತ್ಯವನ್ನು ಕೇವಲ ರಸಸ್ವಾದನೆಗಾಗಿಯೋ, ಮನಸ್ಸಿನ ಸಂತೋಷಕ್ಕಾಗಿಯೋ ಅನುಭವಿಸುವ ದೃಷ್ಟಿ ಧೋರಣೆಗಳಿಗಿಂತ ಭಿನ್ನವಾದ ಮಾರ್ಗಗಳು ಈಗ ಚಲಾವಣೆಯಲ್ಲಿವೆ. ನಮ್ಮ ಸುತ್ತ ಹಬ್ಬಿಕೊಳ್ಳುತ್ತಿರುವ ಜಾಗತೀಕರಣದ ಜಾಲ, ಖಾಸಗಿ ಶಕ್ತಿಗಳ ಹಿಡಿತ, ಉದಾರವಾದ ಧೋರಣೆಗಳು, ಜಾತಿವಾದದ ಹೊಸ ವಿನ್ಯಾಸಗಳು, ವಸಾಹತುಶಾಹಿ ನೆನಪುಗಳು, ನವವಸಾಹತು ಶಕ್ತಿಗಳ ವಿಜೃಂಭಣೆ, ವಿದೇಶೀ ಪ್ರಭಾವಗಳ ಒತ್ತಡ, ನಮ್ಮ ಸಂದರ್ಭದಲ್ಲಿಯೇ ಹುಟ್ಟುತ್ತಿರುವ ಪರಿಸರ ನಾಶ, ಕೋಮುದ್ವೇಷ, ಹಿಂಸೆಯ ವಿವಿಧ ರೂಪಗಳು ಹಾಗೂ ಅಡ್ಡಾದಿಡ್ಡಿ ಬೆಳೆಯುತ್ತಿರುವ ನಗರಶಕ್ತಿ ಇವುಗಳ ಮಧ್ಯೆ ನಮ್ಮದೇ ಆದ ಹೊಸ ಎಚ್ಚರವನ್ನು ಖಚಿತವಾಗಿ ರೂಪಿಸಿಕೊಳ್ಳುವ ಅಗತ್ಯವಿದೆ. ಹೀಗಾಗಿ ಸಾಹಿತ್ಯದ ಸೀಮಿತ ನಿರ್ವಚನಗಳು ಇಂದು ತೀರಾ ಅಪ್ರಸ್ತುತವಾಗಿಬಿಟ್ಟಿವೆ. ಈ ಹೊತ್ತಿನ ಸಾಹಿತ್ಯ ಸಂಬಂಧಿಯಾದ ನಿಲುವುಗಳು, ಧೋರಣೆಗಳು ನಮ್ಮ ಪ್ರಜಾಸತ್ತಾತ್ಮಕ ಮೌಲ್ಯಗಳ ಅರ್ಥಪೂರ್ಣ ಆವಿಷ್ಕಾರಕ್ಕಾಗಿ, ಸಾಮಾಜಿಕ ನ್ಯಾಯದ ನೆಲೆಗಳನ್ನು ಗಟ್ಟಿಗೊಳಿಸುವ ಉದ್ದೇಶಗಳನ್ನು ತನ್ನ ಕೇಂದ್ರಕ್ಕೆ ತಂದುಕೊಳ್ಳುವುದರತ್ತ ಚಲಿಸುತ್ತಿವೆ. ನಮ್ಮ ಸಂದರ್ಭದಲ್ಲಿ ಸಂಸ್ಕೃತಿಯ ಯಜಮಾನಿಕೆಯನ್ನು ಸ್ಥಾಪಿಸುವ ಪ್ರಬಲ ಶಕ್ತಿಗಳು ದಿನೇ ದಿನೇ ಎಗ್ಗಿಲ್ಲದೆ ಬೆಳೆಯುತ್ತಿವೆ. ಹಣ, ಜಾತಿ, ಧರ್ಮ, ತಂತ್ರಜ್ಞಾನ ಇವುಗಳೆಲ್ಲ ಒಟ್ಟುಗೂಡಿ ಸಂಸ್ಕೃತಿಯ ಗಂಭೀರ ನೆಲೆಗಟ್ಟನ್ನು ಭಗ್ನಗೊಳಿಸುತ್ತಲಿವೆ. ಪ್ರಾದೇಶಿಕ ಸತ್ವಶಕ್ತಿಗಳು ಕ್ರಮೇಣ ಕ್ಷೀಣಗೊಂಡು ನಾವೆಲ್ಲ ನಮ್ಮ ಕಣ್ಣಿಗೆ ಕಾಣದ ಅಮೂರ್ತ ಜುಗಾರಿ ಕ್ರಾಸಿನ ಮಾಯಾಲೋಕದ ಬಂದಿಗಳಾಗುವ ಅಪಾಯದಲ್ಲಿ ಸಿಲುಕಿದ್ದೇವೆ.

ಇಂಥ ಕೇಂದ್ರೀಕೃತ ಶಕ್ತಿಯ ವಿರುದ್ಧ ಕನ್ನಡ ಸಾಹಿತ್ಯ ಎಂದಿನಿಂದಲೂ ಸೆಣೆಸುತ್ತ, ತನ್ನದೇ ಆದ ಸ್ವಂತಿಕೆಯನ್ನು ರಕ್ಷಿಸಿಕೊಳ್ಳುತ್ತ ಬಂದಿದೆ. ಇದನ್ನು ನಮ್ಮ ಮೊದಲ ಮಹತ್ವದ ಚಿಂತಕ ಶ್ರೀವಿಜಯ ತನ್ನ 'ಕವಿರಾಜಮಾರ್ಗ'ದ ಮೂಲಕ.ಅತ್ಯಂತ ಸ್ಪಷ್ಟವಾಗಿ ತೋರಿಸಿಕೊಟ್ಟ. ನಮ್ಮ ಸಂಸ್ಕೃತಿಯ ಎಲ್ಲ ಕಾಲದ ಶ್ರೇಷ್ಠ ಕವಿ ಪಂಪ ಕೇವಲ ಕಾವ್ಯಕೇಂದ್ರಿತ ನೆಲೆಯಲ್ಲಿ ನಿಲ್ಲದೆ ಸಂಸ್ಕೃತಿ ಚಿಂತನೆಯ ಗತಿಶೀಲತೆಯ ದಾರಿಗಳನ್ನೇ ಅನಾವರಣ ಮಾಡಿದ. ಸಾಮಾಜಿಕ ನ್ಯಾಯದ ನೆಲೆಯನ್ನು ಕನ್ನಡದ ಸಂದರ್ಭದಲ್ಲಿ ಚಾಲೂ ಮಾಡಿದ ಚೇತನಗಳು ಅಸಂಖ್ಯ. ಪಂಪನಿಂದ ಮೊದಲುಗೊಂಡು ದೇವರ ದಾಸಿಮಯ್ಯ, ಬಸವಣ್ಣ, ಅಲ್ಲಮಪ್ರಭು, ಅಕ್ಕಮಹಾದೇವಿ, ಮಾದಾರ ಚೆನ್ನಯ್ಯ, ಮಡಿವಾಳ ಮಾಚಿದೇವ, ಹಾಸನ ಜಿಲ್ಲೆಯವನೇ ಆದ ಸಕಲೇಶ ಮಾದರಸ, ಕನಕ - ಪುರಂದರದಾಸರು, ಕುಮಾರವ್ಯಾಸ, ಲಕ್ಷ್ಮೀಶ, ಶಿಶುನಾಳದ ಶರೀಫ, ರಾಘವಾಂಕ, ರತ್ನಾಕರವರ್ಣಿ, ಗರಗದ ಮಡಿವಾಳಪ್ಪ ಹೀಗೆ ಒಂದು ದೊಡ್ಡ ಪರಿವಲಯವೇ ಇದೆ. ಇವರೆಲ್ಲ ನಮ್ಮ ನಂಸ್ಕೃತಿಯ ಸಂದರ್ಭದಲ್ಲಿ ನಮ್ಮ ನಿಮ್ಮಂತೆ ಜೀವಂತ ವ್ಯಕ್ತಿಗಳೇ. ಆದರೆ ಅವರು ನಾಡಿನ ಸಂಸ್ಕೃತಿ ಚೇತನದ ಪ್ರತೀಕಗಳು. ಈ ಸಂವೇದನೆ ಆಧುನಿಕ ಕಾಲದಲ್ಲಿ ಮತ್ತೆ ಮತ್ತೆ ಹೊಸ ಚಿಂತನೆಗೆ ದಾರಿ ಮಾಡಿಕೊಟ್ಟ ಪರಿ ನಮ್ಮೆಲ್ಲರಿಗೂ ಪರಿಚಿತವೇ ಆಗಿದೆ. ನಮ್ಮ ಸಮಗ್ರ ಕರ್ನಾಟಕದ ಚೈತನ್ಯ ವಿಕಾಸಗೊಳ್ಳುವ ನಿಟ್ಟಿನಲ್ಲಿ ನಮ್ಮ ಗ್ರಾಮೀಣ ಬದುಕಿನಲ್ಲಿ ಹಾಸುಹೊಕ್ಕಾಗಿರುವ ಕನ್ನಡದ ಪ್ರೀತಿ ಶ್ರದ್ಧೆಗಳು ಕನ್ನಡತನವನ್ನು ಉಳಿಸಿ ಬೆಳೆಸುವಲ್ಲಿ ಇಂದಿಗೂ ಕ್ರಿಯಾಶಾಲಿಯಾಗಿವೆ.

ಈ ಮಧ್ಯೆ ನಮ್ಮ ಮಧ್ಯಮ ವರ್ಗ ಕನ್ನಡ ಭಾಷೆ - ಸಂಸ್ಕೃತಿಗಳ ಬಗೆಗೆ ಅಂಥ ಪ್ರೀತಿ ಶ್ರದ್ಧೆಗಳನ್ನು ತೋರುತ್ತಿಲ್ಲವೆಂಬುದು ತುಂಬ ಆತಂಕದ ಸಂಗತಿಯಾಗಿದೆ. ಮಧ್ಯಮ ವರ್ಗದವರು ದಿನೇ ದಿನೇ ಕನ್ನಡ ಭಾಷೆಯಿಂದ ವಿಮುಖರಾಗುತ್ತಿದ್ದಾರೆ. ಇಂಗ್ಲಿಷ್ ಭಾಷೆಯ ವ್ಯಾಮೋಹ ಕನ್ನಡ ನಾಡಿನಲ್ಲಿ ಮಾತ್ರವಲ್ಲದೆ ಇಡೀ ಭಾರತದಲ್ಲೆಲ್ಲಾ ವ್ಯಾಪಿಸಿದೆ. ನಗರಗಳು, ಜಿಲ್ಲಾ ಕೇಂದ್ರ, ತಾಲೂಕುಗಳಲ್ಲಿಯೂ ಈ ವ್ಯಾಮೋಹ ಹೆಚ್ಚುತ್ತಿರುವುದನ್ನು ನಾವು ಕಾಣುತ್ತಿದ್ದೇವೆ. ಇದು ಕನ್ನಡ ಸಂಸ್ಕೃತಿಯ ವಿಕಾಸಕ್ಕೆ ಮಾರಕವೇ ಸರಿ. ಹೀಗೆ ಹೇಳುವಾಗ ಮತ್ತೊಂದು ಭಾಷೆಗೆ ವಿರೋಧವನ್ನು ತೋರಿಸುವ ಧೋರಣೆ ನಮ್ಮದು ಎಂದು ಭಾವಿಸಬಾರದು. ನಮಗೆ ಅನಿವಾರ್ಯವಾಗಿ ಬೇಕಾದ ಇತರ ಭಾಷೆಗಳ ಪ್ರಯೋಜನ ಪಡೆಯಬೇಕೇ ಹೊರತು ನಮ್ಮ ಭಾಷೆಗೆ ಧಕ್ಕೆಯನ್ನು ತರುವ ರೀತಿಯಲ್ಲಿ ಅನ್ಯಭಾಷೆಯ ಬಳಕೆ ಸಲ್ಲದು. ನಗರಗಳ ಬೆಳವಣಿಗೆ ಮತ್ತು ಇಂಗ್ಲೀಷ್

ಭಾಷೆಯ ವ್ಯಾಪಕ ಬಳಕೆಗೂ ನೇರ ಸಂಬಂಧ ಇದ್ದಂತೆ ತೋರುತ್ತಿದೆ. ಇಂಗ್ಲಿಷ್ ಭಾಷೆ ಮೇಲುವರ್ಗದವರ, ಮೇಲುಜಾತಿಯವರ, ಬಂಡವಳಿಗರ ಬಂಡವಾಳ ಆಗಿಬಿಟ್ಟಿದೆ. ಇಂಗ್ಲಿಷ್ ಭಾಷೆಯನ್ನು ತಿಳಿಯದವರ ಹಾಗೂ ಇಂಗ್ಲಿಷ್ ಭಾಷೆ ತಿಳಿದವರ ವರ್ಗ ಎಂಬ ಎರಡು ವರ್ಗಗಳೇ ಏರ್ಪಟ್ಟಿವೆ. ಇದರಿಂದ ಇಂಗ್ಲಿಷ್ ಭಾಷೆಯನ್ನು ಸರಿಯಾಗಿ ಕಲಿಯದ ಗ್ರಾಮೀಣ ಪರಿಸರದ ಮಕ್ಕಳು, ದಲಿತ ಸಮುದಾಯ ಹಾಗೂ ಬಡವರು ಕೀಳರಿಮೆಯಿಂದ ನರಳುವಂತಾಗಿದೆ. ಎಲ್.ಕೆ.ಜಿ.ಯಿಂದ ಇಂಗ್ಲಿಷ್ ಮಾಧ್ಯಮದಲ್ಲೇ ಓದುವ ಮಕ್ಕಳು ಎಸ್.ಎಸ್.ಎಲ್.ಸಿ.ಗೆ ಬರುವ ಹೊತ್ತಿಗೆ ಹನ್ನೆರಡು ವರ್ಷ ಇಂಗ್ಲಿಷ್ ಕಲಿತಿರುತ್ತಾರೆ. ಅದೇ ಕನ್ನಡ ಮಾಧ್ಯಮದಲ್ಲಿ ಓದುವ ಮಕ್ಕಳು ಐದನೆಯ ತರಗತಿಯಿಂದ ಇಂಗ್ಲಿಷ್ ಭಾಷೆಯನ್ನು ಕಲಿಯಲು ಆರಂಭಿಸಿ ಎಸ್.ಎಸ್.ಎಲ್.ಸಿ.ಗೆ ಬರುವ ಹೊತ್ತಿಗೆ ಕೇವಲ ಐದು ವರ್ಷ ಇಂಗ್ಲಿಷ್ ಕಲಿತು ಎಸ್.ಎಸ್.ಎಲ್.ಸಿ. ಪರೀಕ್ಷೆ ಬರೆಯುತ್ತಾರೆ. ಕಳೆದ ವರ್ಷ ಕರ್ನಾಟಕದಲ್ಲಿ ಕನ್ನಡ ಮಾಧ್ಯಮದ ನಾಲ್ಕು ಲಕ್ಷ ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಕುಳಿತ ವಿದ್ಯಾರ್ಥಿ ವಿದ್ಯಾರ್ಥಿನಿಯರಲ್ಲಿ ಸುಮಾರು ಎರಡು ಲಕ್ಷ ವಿದ್ಯಾರ್ಥಿಗಳು ಇಂಗ್ಲಿಷ್ ಭಾಷೆಯ ವಿಷಯದಲ್ಲಿ ಅನುತ್ತೀರ್ಣರಾಗಿದ್ದಾರೆ. ಇದು ಸರ್ಕಾರದ ಶಿಕ್ಷಣ ಇಲಾಖೆಯೇ ನೀಡಿರುವ ಅಂಕಿ ಅಂಶಗಳಿಂದ ತಿಳಿದುಬರುತ್ತದೆ. ಸಾಮಾನ್ಯ ಇಂಗ್ಲಿಷ್ ತಿಳುವಳಿಕೆಯಿಲ್ಲದೆ ಈ ಹೊತ್ತು ಉದ್ಯೋಗಗಳನ್ನು ಪಡೆಯುವುದೇ ಕಷ್ಟವಾಗುತ್ತಿದೆ. ಇಂಗ್ಲಿಷ್ ಭಾಷೆಯನ್ನು ಪ್ರಾಥಮಿಕ ಒಂದನೇ ತರಗತಿಯಿಂದಲೇ ಕನ್ನಡ ಮಾಧ್ಯಮದಲ್ಲಿ ಓದುತ್ತಿರುವ ಮಕ್ಕಳಿಗೆ ಕಲಿಸುವುದು ತೀರಾ ಅಗತ್ಯವಾಗಿದೆ. ಹಾಗೆಯೇ ಕನ್ನಡ ಭಾಷೆಯನ್ನು ಕಲಿಯದೆ ನುಣುಚಿಕೊಳ್ಳುತ್ತಿರುವ ಇಂಗ್ಲಿಷ್ ಮಾಧ್ಯಮದ ವಿದ್ಯಾರ್ಥಿಗಳಿಗೆ ಕಡ್ಡಾಯವಾಗಿ ಕನ್ನಡವನ್ನು ಕಲಿಸುವುದು ಅತ್ಯಂತ ಅಗತ್ಯವಾಗಿದೆ. ಅದರ ಜೊತೆಗೇ, ಮಕ್ಕಳ ಮನಸ್ಸಿನ ಸಹಜ ವಿಕಾಸದ ದೃಷ್ಟಿಯಿಂದ ಕರ್ನಾಟಕದ ಎಲ್ಲ ಶಾಲೆಗಳಲ್ಲೂ ಮಾತೃಭಾಷಾ ಮಾಧ್ಯಮ ಸಮಾನವಾಗಿ ಜಾರಿಗೆ ಬರಬೇಕಾಗಿದೆ. ಕನ್ನಡ ನಾಡಿಗೆ ಹೊರ ಪ್ರಾಂತ್ಯಗಳಿಂದ ಬಂದು ವಿದ್ಯಾಭ್ಯಾಸ ಮಾಡುತ್ತಿರುವ ವಿದ್ಯಾರ್ಥಿಗಳಿಗೂ, ಭಾಷಾ ಅಲ್ಪಸಂಖ್ಯಾತರಿಗೂ ಅವರ ಭಾಷೆಯೊಂದಿಗೆ ಕನ್ನಡವನ್ನು ಕಡ್ಡಾಯವಾಗಿ ಕಲಿಸುವ ಪ್ರಯತ್ನ ಜರೂರಾಗಿ ಆಗಲೇಬೇಕಾಗಿದೆ. ಇದರಿಂದ ಕರ್ನಾಟಕದ ವಿದ್ಯಾರ್ಥಿ ಸಮುದಾಯದಲ್ಲಿ ತಾರತಮ್ಯ ಭಾವನೆ ತೊಲಗಿ ಆತ್ಮವಿಶ್ವಾಸವನ್ನು ತುಂಬಿದಂತಾಗುತ್ತದೆ.

ಇದರೊಂದಿಗೆ ಗ್ರಾಮೀಣ ಕನ್ನಡ ಶಾಲೆಗಳನ್ನು ಶಕ್ತಿಯುತವನ್ನಾಗಿಸುವ ಕ್ರಿಯಾಯೋಜನೆಯೂ ಆಗಬೇಕು. ನಾಡಿನ ಎಲ್ಲ ಸರ್ಕಾರಿ ಶಾಲೆಗಳು ಗಟ್ಟಿಯಾಗಿ ಬೆಳೆದು ವಿದ್ಯಾರ್ಥಿಗಳನ್ನು ಆಕರ್ಷಿಸುವಂತಾಗಬೇಕು. ಈ ಜಾಗತೀಕರಣದ ಕಾಲದಲ್ಲಿ ಆಸ್ಟ್ರೇಲಿಯಾ, ಆಸ್ಟ್ರಿಯಾ, ಚೀನಾ ಮುಂತಾದ ದೇಶಗಳು ಮಕ್ಕಳಿಗೆ ಒಂದನೇ ತರಗತಿಯಿಂದಲೇ ಇಂಗ್ಲಿಷ್ ಅಥವಾ ವಿದೇಶಿ ಭಾಷೆಯನ್ನು ಕಲಿಸತೊಡಗಿವೆ. ಭಾರತದ ಪಶ್ಚಿಮ ಬಂಗಾಳ, ಗುಜರಾತ್, ತಮಿಳುನಾಡು, ಆಂಧ್ರ, ಕೇರಳ ಮಹಾರಾಷ್ಟ್ರಗಳಲ್ಲಿ ಪ್ರಾಥಮಿಕ ಹಂತದಿಂದಲೇ ಇಂಗ್ಲಿಷ್ ಕಲಿಕೆ ಆರಂಭಗೊಂಡಿದೆ. ನಮ್ಮ ನಾಡಿನಲ್ಲಿ ನಗರದ ಮಕ್ಕಳಿಗಿಂತ ಗ್ರಾಮೀಣ ಮಕ್ಕಳು ಹದಿನೈದು ವರ್ಷ ಹಿಂದೆ ಬಿದ್ದಿದ್ದಾರೆ. ಈ ಅಸಮತೋಲನವನ್ನು ಕೊನೆಗಾಣಿಸಿದ್ದಾರೆ. ಶಾಲೆಗಳಿಗೆ ಶರಣು ಹೊಡೆದು ಹೊರಬೀಳುವ ವಿದ್ಯಾರ್ಥಿಗಳ ಸಂಖ್ಯೆ ದಿನೇ ದಿನೇ ಹೆಚ್ಚಾಗುತ್ತ ಹೋಗುತ್ತದೆ. ಸರ್ಕಾರಿ ಶಾಲೆಗಳು ಅವನತಿಯತ್ತ ಸಾಗಿ ಖಾಸಗಿ ಶಾಲೆಗಳು ಹೆಚ್ಚುತ್ತ ಹೋಗಿ ವ್ಯಾಪಾರೀಕರಣದ ವಾತಾವರಣ ಇನ್ನೂ ಬಲಗೊಳ್ಳುವಂಥ ಪರಿಸ್ಥಿತಿಯನ್ನು ಆಹ್ವಾನಿಸಿದಂತಾಗುತ್ತದೆ.

ವಿದ್ಯಾರ್ಥಿ ಸಮುದಾಯದಲ್ಲಿ ಇಂಗ್ಲಿಷ್ ಕಲಿಕೆಯ ಈ ಅಂತರದಿಂದಾಗಿ ಎಸ್.ಎಸ್.ಎಲ್.ಸಿ., ಪಿಯುಸಿ, ಡಿಗ್ರಿ ಪರೀಕ್ಷೆಗಳಲ್ಲಿ ಇಂಗ್ಲಿಷ್‌ನಲ್ಲಿಯೇ ಲಕ್ಷಾಂತರ ವಿದ್ಯಾರ್ಥಿಗಳು ಅನುತ್ತೀರ್ಣರಾಗುತ್ತಿದ್ದಾರೆ. ಇದರಿಂದ ಇಂಜಿನಿಯರಿಂಗ್, ವೈದ್ಯಕೀಯ, ಕಂಪ್ಯೂಟರ್, ಐ.ಎ.ಎಸ್., ಕೆ.ಎ.ಎಸ್. ಪರೀಕ್ಷೆಗಳಲ್ಲಿ ಅಪಾರ ಕಷ್ಟ ಅನುಭವಿಸುತ್ತಿದ್ದಾರೆ. ಸಿ.ಇ.ಟಿ. ರೀತಿಯ ವಿವಿಧ ಪೂರ್ವ ಪರೀಕ್ಷೆಗಳಲ್ಲಿ ಗ್ರಾಮೀಣ ಹಾಗೂ ದುರ್ಬಲ ವರ್ಗಗಳ ವಿದ್ಯಾರ್ಥಿಗಳು ಸ್ಪರ್ಧಿಸುವ ಸಾಧ್ಯತೆಗಳು ಇಳಿಮುಖವಾಗುತ್ತಿವೆ. ಸಿ.ಇ.ಟಿ. ಪರೀಕ್ಷೆ ಕನ್ನಡದಲ್ಲೂ ನಡೆಯುವಂತೆ ನಾವೆಲ್ಲ ಹೋರಾಡಬೇಕಾಗಿದೆ. ಕಳೆದ ಹಲವಾರು ವರ್ಷಗಳಿಂದ ಆರಂಭಗೊಂಡಿರುವ ಹೊಸ

ಕೋರ್ಸುಗಳಿಗೆ ಗ್ರಾಮೀಣ ವಿದ್ಯಾರ್ಥಿಗಳು ಪ್ರವೇಶಿಸುವ ಸಾಧ್ಯತೆಗಳು ಕಡಿಮೆಯಾಗುತ್ತಿವೆ. ಇದನ್ನು ಕೇವಲ ಭಾಷಾಭಿಮಾನದ ನೆಲೆಯಲ್ಲಿ ನೋಡದೆ ವಸ್ತುಸ್ಥಿತಿ ಹಾಗೂ ವ್ಯಾವಹಾರಿಕ ಪ್ರಜ್ಞೆಯ ನೆಲೆಯಲ್ಲಿ ನೋಡಬೇಕೆಂಬ ನಾಡಿನ ಶಿಕ್ಷಣ ತಜ್ಞರು, ಲೇಖಕರು ಹಾಗೂ ಸಾಮಾಜಿಕ ಸಂಘಟನೆಗಳ ಕಾರ್ಯಕರ್ತರ ನಿಲುವನ್ನು ನಾನು ಎತ್ತಿ ಹಿಡಿಯುತ್ತಿದ್ದೇನೆ.

ಈ ತಾರತಮ್ಯದ ಚರ್ಚೆಯ ಸಂದರ್ಭದಲ್ಲಿಯೇ ಮೀಸಲಾತಿಯ ಬಗೆಗೆ ಈಗ ಎದ್ದಿರುವ ಸಮಸ್ಯೆಯನ್ನು ಕುರಿತು ಕೆಲವು ಮಾತುಗಳನ್ನು ಹೇಳಬೇಕು. ವಿವಿಧತೆಯ ನಡುವೆ ಏಕತೆಯ ತತ್ವವನ್ನು ನಾವು ಪ್ರಾಮಾಣಿಕವಾಗಿ ನಿಜಗೊಳಿಸಲು ಎಲ್ಲ ಜಾತಿ-ವರ್ಗಗಳಿಗೂ ಪ್ರಾತಿನಿಧ್ಯ ಕೊಟ್ಟರೆ ಮಾತ್ರ ಪ್ರಜಾಸತ್ತಾತ್ಮಕ ಮೌಲ್ಯಗಳಿಗೂ ಸಾಮಾಜಿಕ ನ್ಯಾಯಕ್ಕೂ ಅರ್ಥ ಬರುತ್ತದೆ. ಜಾತ್ಯತೀತತೆ ಎಂದರೆ ಜಾತಿಗಳ ಮೇಲ್ಪದರದ ನಿರಾಕರಣೆಯಲ್ಲ; ಜಾತಿಗಳ ನಡುವೆ ಇರುವ ಅಗಾಧ ಕಂದರವನ್ನು ಇಲ್ಲವಾಗಿಸುವುದು ಹಾಗೂ ಎಲ್ಲ ಜಾತಿಗಳ ಮಕ್ಕಳಿಗೂ ಸಮಾನ ಅವಕಾಶ ಕಲ್ಪಿಸುವುದೇ ಆಗಿದೆ. ಈ ಹಿನ್ನೆಲೆಯಲ್ಲಿ ಭಾರತದ ಹೊಟ್ಟೆ ತುಂಬಿರುವ ವರ್ಗದವರು ನಡೆಸುತ್ತಿರುವ ಮೀಸಲಾತಿ ವಿರೋಧಿ ಚಳವಳಿ ಅತ್ಯಂತ ಅಮಾನೀಯವೂ ಬರ್ಬರವೂ ಆಗಿದೆ.

ಕರ್ನಾಟಕದ ಚಿನ್ನದ ಹಬ್ಬವನ್ನು ಆಚರಿಸುತ್ತಿರುವ ಈ ಕಾಲಮಾನದಲ್ಲಿ ಅರಣ್ಯವಿನಾಶದ ಕ್ರೌರ್ಯವನ್ನು ನಾವೆಲ್ಲ ತುಂಬ ಗಂಭೀರವಾಗಿ ಯೋಚಿಸಬೇಕಾಗಿದೆ. ಕುವೆಂಪು, ಕಾರಂತ, ಪೂರ್ಣಚಂದ್ರ ತೇಜಸ್ವಿ ಅವರ ಕೃತಿಗಳು ಅರಣ್ಯ ಪರಿಸರವನ್ನು ಕೇಂದ್ರವಾಗಿಸಿಕೊಂಡ ಸಂಸ್ಕೃತಿನಿಷ್ಠ ಕೃತಿಗಳು. ಕರ್ನಾಟಕ ನಾಡಿನ ಸಮೃದ್ಧಿಯ ರಾಜ್ಯವೆಂದು ಒಂದು ಕಾಲದಲ್ಲಿ ಕರೆಸಿಕೊಂಡಿತ್ತು. ಈಗ ನಾಡಿನ ಎಲ್ಲೆಡೆ ಪರಿಸರ ನಾಶವಾಗುತ್ತಿರುವುದನ್ನು ನಾವೆಲ್ಲ ಕಾಣುತ್ತಿದ್ದೇವೆ. ನದಿಗಳು, ನದಿಮೂಲಗಳು ಮಲಿನಗೊಳ್ಳುತ್ತಿವೆ. ಇದರಿಂದಾಗಿ ಗ್ರಾಮೀಣ ಜೀವನದಲ್ಲಿಯೂ ಅನೇಕ ಪಲ್ಲಟಗಳಾಗುತ್ತಿವೆ. ಹಾಸನ ಜಿಲ್ಲೆಯಂಥ ಅರೆಮಲೆನಾಡು ಕೂಡ ಈ ವಿನಾಶವನ್ನು ಎದುರಿಸುತ್ತಿದೆ. ಅರಣ್ಯ ಸಂಪನ್ಮೂಲಗಳನ್ನು ಆಧರಿಸಿದ ಉದ್ಯಮಗಳು ದೊಡ್ಡ ಪ್ರಮಾಣದಲ್ಲಿ ಬೆಳೆಯುತ್ತಿರುವುವೇ ಅರಣ್ಯನಾಶಕ್ಕೆ ಮುಖ್ಯ ಕಾರಣವಾಗಿದೆ. ಬೆಳೆಭೂಮಿಯಲ್ಲಿ ಕೈಗಾರಿಕೆಗೆ ಬೇಕಾದ ಮರಗಳನ್ನು ಬೆಳೆಸಿ ಅಗತ್ಯವಾದ ದವಸ-ಧಾನ್ಯಗಳನ್ನು ಬೆಳೆಯುವ ಪರಿಪಾಠ ಕ್ಷೀಣಿಸುತ್ತಿದೆ. ಅರಣ್ಯ ಸಂಪತ್ತು ನಾಶಗೊಳ್ಳುತ್ತಿರುವುದರಿಂದ ನಮ್ಮ ಜೀವನಕ್ರಮವೇ ಬುಡಮೇಲಾಗಿ ಹೋಗಿದೆ. ಪರಿಸರ ಹೀಗೆ ನಾಶವಾಗುತ್ತ, ಮಲಿನವಾಗುತ್ತ ಹೋದಂತೆಲ್ಲ ನಮ್ಮ ಸಂಸ್ಕೃತಿಯ ಜೀವಂತಿಕೆಗೇ ದೊಡ್ಡ ಅಪಾಯವಿದೆ ಎಂಬುದನ್ನು ಸಂಸ್ಕೃತಿಯ ಬಗೆಗೆ ಗಾಢವಾಗಿ ಯೋಚಿಸುತ್ತಿರುವವರೆಲ್ಲ ತಿಳಿಯಬೇಕಾಗಿದೆ. ಗ್ರಾಮೀಣ ಪರಿಸರವನ್ನು ಜೀವಂತವಾಗಿ ಕಾಪಾಡಲು ಪರಿಸರದ ಬಗೆಗೆ ಗಂಭೀರ ಆಸಕ್ತಿ ಮೂಡಬೇಕು. ಜಿಲ್ಲಾ ಪಂಚಾಯಿತಿ, ಗ್ರಾಮಪಂಚಾಯಿತಿ ಹಾಗೂ ಸ್ಥಳೀಯ ಸಂಸ್ಥೆಗಳೊಂದಿಗೆ ಆಯಾ ಪ್ರದೇಶದ ನಾಗರಿಕರು ಒಗ್ಗೂಡಿ ಪರಿಸರ ರಕ್ಷಣೆಯ ಕಾರ್ಯಕ್ರಮವನ್ನು ಹಾಕಿಕೊಳ್ಳುವ ಅಗತ್ಯವಿದೆ. ಹೇಮಾವತಿ, ಕಾವೇರಿ, ಯಗಚಿಯಂಥ ನದಿಗಳು ಹಾಗೂ ಸಾಕಷ್ಟು ದೊಡ್ಡ ಪ್ರಮಾಣದಲ್ಲಿರುವ ಅರಣ್ಯ ಸಂಪತ್ತು ಉಳಿದರೆ ಇಂದಿನ ಜನಜೀವನ ಹಾಗೂ ಮುಂದಿನ ಪೀಳಿಗೆಯ ಬದುಕು ಸಮೃದ್ಧಗೊಳ್ಳುತ್ತದೆ ಎಂಬ ಮುನ್ನೋಟ ನಮ್ಮದಾಗಬೇಕು.

ಶಿಲ್ಪಕಲೆಯ ಮೂಲಕ ವಿಶ್ವಮಾನ್ಯತೆಯನ್ನು ಗಳಿಸಿರುವ ಜಿಲ್ಲೆ ಹಾಸನ ಜಿಲ್ಲೆ, ಶ್ರವಣಬೆಳಗೊಳದ ಗೊಮ್ಮಟ, ಬೇಲೂರು, ಹಳೇಬೀಡುಗಳು ಜಗತ್ತಿನಲ್ಲೇ ಪ್ರಸಿದ್ಧಿಯನ್ನು ಪಡೆದಿದೆ. ಇವೇ ಅಲ್ಲದೆ ದೊಡ್ಡಗದ್ದವಳ್ಳಿ, ಕೊಂಡಜ್ಜಿ ಕೋರಮಂಗಲ, ಮೊಸಳೆಯ ಜೋಡಿ ದೇವಾಲಯಗಳು, ಅಸಂಖ್ಯ ಬಸದಿಗಳು, ಹಲ್ಮಿಡಿ ಎಂಬ ಚಾರಿತ್ರಿಕ ಮಹತ್ವದ ಹಳ್ಳಿ, ಹರಿಹರಪುರ, ಬಸ್ತಿಹಳ್ಳಿ, ಅರಕೆರೆ, ಅಗ್ಗುಂದ, ಮರ್ಕುಲಿ, ಮುದುಗೆರೆ, ನುಗ್ಗೇಹಳ್ಳಿ, ಶಾಂತಿಗ್ರಾಮ, ಬೆಳವಾಡಿ, ಹೆರಗು, ಜಾವಗಲ್ಲು ಶಿಲ್ಪಕಲೆಯ ಔನ್ನತ್ಯಕ್ಕೆ ಹೆಸರಾಗಿವೆ. ಆದರೆ, ಅನೇಕ ದೇವಾಲಯಗಳು ತೀರ ಭಗ್ನಗೊಂಡಿವೆ. ಪ್ರಾಚ್ಯವಸ್ತು ಇಲಾಖೆಯ ಉದಾಸೀನ ಹಾಗೂ ಸ್ಥಳೀಯರ ಆಸಕ್ತಿಯ ಕೊರತೆಯಿಂದ ಈ ದೇವಾಲಯಗಳು ದುಸ್ಥಿತಿಯಲ್ಲಿವೆ. ಇವುಗಳನ್ನು ಸುಸ್ಥಿತಿಗೆ ತಂದರೆ ಬೇಲೂರು ಹಳೇಬೀಡು, ಬೆಳಗೊಳಗಳ ಬಗೆಗೆ ಆಸಕ್ತಿ ತೋರುವ ಪ್ರವಾಸಿಗರು ಈ ಶಿಲ್ಪಕಲೆಯ ತಾಣಗಳತ್ತಲೂ ಆಕರ್ಷಿತರಾಗುತ್ತಾರೆ.

ಜಿಲ್ಲೆಯ ಈ ಸಂಪತ್ತನ್ನು, ಸಂಸ್ಕೃತಿಯನ್ನು ಅರ್ಥಪೂರ್ಣವನ್ನಾಗಿಸಲು ಬಯಸುವವರೆಲ್ಲ ಈ ಸಂಗತಿಯನ್ನು ಗಂಭೀರವಾಗಿ ಪರಿಶೀಲಿಸಬೇಕು. ಇಂಥ ಸ್ಥಳಗಳಿಗೆ ಪ್ರೇಕ್ಷಕರು ಮುಗಿಬೀಳುವಂತಾಗಲು ರಸ್ತೆ ಮತ್ತಿತರ ಸೌಕರ್ಯ ಚೆನ್ನಾಗಬೇಕು. ನೈಸರ್ಗಿಕ ಉದ್ಯಾನವನಗಳನ್ನು ನಿರ್ಮಿಸಿ ಜಿಲ್ಲೆಯ ಜನರು ಹಾಗೂ ಪ್ರವಾಸಿಗರು ಆಕರ್ಷಿತರಾಗುವಂತೆ ಮಾಡಲು ಸಾಧ್ಯವಾಗಬೇಕು. ಜಿಲ್ಲೆಯ, ನಾಡಿನ ಜೀವಂತ ಸಂಸ್ಕೃತಿಯನ್ನು ಬಿತ್ತರಿಸುವ ವಾತಾವರಣ ನಿರ್ಮಾಣವಾಗಬೇಕು. ಹಾಸನ ಪ್ರಭಾವಿ ರಾಜಕೀಯ ಶಕ್ತಿಯನ್ನು ಹೊಂದಿದ ಜಿಲ್ಲೆ, ಅಲ್ಲದೆ ಸಂಸ್ಕೃತಿ ಶಿಕ್ಷಣಗಳ ಬಗೆಗೆ ಪ್ರಬುದ್ಧ ಪ್ರಜ್ಞೆಯನ್ನು ಹೊಂದಿರುವ ಚಿಂತಕರು ಈ ಜಿಲ್ಲೆಯಲ್ಲಿ ಎಂದಿನಿಂದಲೂ ಇದ್ದಾರೆ. ನಮ್ಮ ದೇಶದ ಶ್ರೇಷ್ಠ ಕಲಾವಿದರಲ್ಲಿ ಒಬ್ಬರಾದ ಕೆ.ಟಿ. ಶಿವಪ್ರಸಾದ್ ಇಲ್ಲಿ ಕ್ರಿಯಾಶೀಲರಾಗಿದ್ದಾರೆ. ಇವರೆಲ್ಲ ಕೂಡಿದರೆ ಇಂಥ ಯೋಜನೆಗಳು ಕಾರ್ಯಗತ ಆಗಿಯೇ ತೀರುತ್ತವೆ. ಹಾಸನ ಜಿಲ್ಲೆಯ ಜನತೆಯ ಇಚ್ಛಾಶಕ್ತಿ ತುಂಬ ಕ್ರಿಯಾಶಾಲಿಯಾದದ್ದು. ಈ ಕಾರಣದಿಂದ ರಾಜ್ಯದಲ್ಲೇ ಏಕೆ, ಇಡೀ ದೇಶದಲ್ಲೇ ಎಲ್ಲ ರೀತಿಗಳಲ್ಲಿಯೂ ಸಮೃದ್ಧ ಜಿಲ್ಲೆಯಾಗಿ ಮೆರೆಯಲು ಸಾಧ್ಯ.

ಈ ಕಾಲದಲ್ಲಿ ಸಾಹಿತ್ಯಕ ಸಂಸ್ಕೃತಿ ಅರ್ಥಪೂರ್ಣವಾಗುವುದು ಪರಿಣಾಮಕಾರಿ ಶಿಕ್ಷಣದ ಮೂಲಕ ಮಾತ್ರ. ಆದರೆ ಈ ಹೊತ್ತು ಭಾಷೆ ಮತ್ತು ಸಾಹಿತ್ಯಗಳ ಬೋಧನೆ ಅಂಚೆಗೆ ಸರಿದಿದೆ. ಭಾಷೆ-ಸಾಹಿತ್ಯಗಳಿಗಿಂತ ವಿಜ್ಞಾನ ಮುಂತಾದ ವಿಷಯಗಳು ತುಂಬ ಮುಖ್ಯವೆಂದು ಪರಿಭಾವಿಸಲಾಗುತ್ತಿದೆ. ಹೀಗಾಗಿ ಕನ್ನಡ ಸಾಹಿತ್ಯದ ಕಲಿಕೆ ವಿದ್ಯಾರ್ಥಿಗಳಿಗೆ ಕೇವಲ ಔಪಚಾರಿಕವಾಗಿ ಮಾತ್ರ ಉಳಿದು ಬಿಟ್ಟಿರುವುದು ವಿಷಾದಕರ ಸಂಗತಿಯಾಗಿದೆ. ಇದು ಸಾಹಿತ್ಯ ಸಂಸ್ಕೃತಿಯ ವಿಕಾಸಕ್ಕೆ ಮಾರಕವಾಗಿಬಿಟ್ಟಿದೆ. ಹೀಗಾಗಿ ಶಿಕ್ಷಣದಲ್ಲಿ ಭಾಷೆ-ಸಾಹಿತ್ಯಗಳ ಬೋಧನೆ ಹೆಚ್ಚು ಗಟ್ಟಿಯಾಗಬೇಕಾದರೆ ಶಿಕ್ಷಣ ತಜ್ಞರು, ಲೇಖಕರು, ಪೋಷಕರು ಮನಸ್ಸು ಮಾಡಬೇಕು. ಅದಕ್ಕೆ ತಕ್ಕುದಾದ ಕಾರ್ಯಕ್ರಮಗಳನ್ನು ರೂಪಿಸಬೇಕು. ಪ್ರಾಚೀನ, ಮಧ್ಯಕಾಲೀನ ಸಾಹಿತ್ಯವನ್ನು ಆಧುನಿಕ ಸಂದರ್ಭಕ್ಕೆ ಅನುಗುಣವಾಗಿ ವಿಭಿನ್ನ ಓದುಗಳಿಗೆ ಗುರಿಪಡಿಸಿ ವಿದ್ಯಾರ್ಥಿಗಳಲ್ಲಿ ಅಭಿರುಚಿ ನಿರ್ಮಾಣದ ಕಾರ್ಯವನ್ನು ಕೈಗೊಳ್ಳುವುದು ತುಂಬ ಅಗತ್ಯವಾಗಿದೆ. ಸಾಂಪ್ರದಾಯಿಕ ಓದುಗಳಿಗಿಂತ ಭಿನ್ನವಾಗಿ ನಮ್ಮ ಸಾಹಿತ್ಯವನ್ನು ವಿದ್ಯಾರ್ಥಿಗಳಿಗೆ ಪರಿಚಯಿಸಿದರೆ ಅವರು ತಮ್ಮ ಮುಂದಿನ ದಿನಗಳಲ್ಲಿಯೂ ಸಾಹಿತ್ಯವನ್ನು ಓದುವ ಅಭಿರುಚಿಯನ್ನು ಬೆಳೆಸಿಕೊಳ್ಳುತ್ತಾರೆ.

ಜಿಲ್ಲೆ, ತಾಲ್ಲೂಕುಗಳಲ್ಲಿನ ಸಾಹಿತ್ಯ ಪರಿಷತ್ತಿನ ಘಟಕಗಳು ಹಾಗೂ ಸಾಹಿತ್ಯ ಸಂಸ್ಕೃತಿಗಳನ್ನು ಬೆಳೆಸಲು ಮುಂದಾಗಿರುವ ಸಂಘ ಸಂಸ್ಥೆಗಳು ಅಭಿರುಚಿ ನಿರ್ಮಾಣಕ್ಕೆ ತಕ್ಕುದಾದ ಗೋಷ್ಠಿಗಳನ್ನು ನಿರಂತರವಾಗಿ ನಡೆಸಿ ಸಾಹಿತ್ಯದ ಗಂಭೀರ ಗ್ರಹಿಕೆ – ಚಿಂತನೆಗಳಿಗೆ ವೇದಿಕೆ ನಿರ್ಮಿಸಬೇಕು. ಗ್ರಾಮೀಣ ಪರಿಸರವನ್ನೂ ಸೇರಿಸಿಕೊಂಡು ಇಂಥ ಕಾರ್ಯಕ್ರಮಗಳು ದೊಡ್ಡ ಪ್ರಮಾಣದಲ್ಲಿ ನಡೆಯಬೇಕೆಂಬುದೇ ಈ ಮಾತುಗಳ ಉದ್ದೇಶವಾಗಿದೆ. ಜಿಲ್ಲೆಯ ತುಂಬ ಹಬ್ಬಿರುವ ಜನಪದ ಸಾಹಿತ್ಯ, ಜನಪದ ಸಂಸ್ಕೃತಿಯನ್ನು ಕೇವಲ ಪಳೆಯುಳಿಕೆಗಳೆಂದು ಭಾವಿಸದೆ ಅದನ್ನು ನಮ್ಮ ಕಾಲಕ್ಕೆ ತಕ್ಕಂತೆ ಸಂವಹನಿಸಲು ಯುವಕ, ಯುವತಿಯರು ಮುಂದಾಗಬೇಕು. ಈ ಹೊತ್ತು ಸಮೂಹ ಸಂವಹನದ ಅಸಂಖ್ಯ ಮಾಧ್ಯಮಗಳು ವ್ಯಾಪಕವಾಗಿ ಬಳಕೆಗೆ ಬರುತ್ತಿವೆ. ಅವುಗಳ ಪ್ರಯೋಜನವನ್ನು ಪಡೆಯುವುದು ಮಾತ್ರವಷ್ಟೇ ಮುಖ್ಯವಾಗದೆ, ಆ ಮಾಧ್ಯಮಗಳ ಒಳಿತು – ಕೆಡಕುಗಳ ಬಗೆಗೆ ವಿಮರ್ಶಾತ್ಮಕ ಪರಿಜ್ಞಾನವನ್ನು ರೂಪಿಸಿಕೊಳ್ಳುವುದು ಅಗತ್ಯವಾಗಿದೆ. ಗಂಭೀರವಾದ ಸಾಹಿತ್ಯ-ಸಂಸ್ಕೃತಿಯ ಬಗೆಗೆ ಅಭಿರುಚಿ ಬೆಳೆಸಿಕೊಳ್ಳುವುದರ ಮೂಲಕ ತಾರತಮ್ಯ ಜ್ಞಾನ ರೂಪಗೊಳ್ಳುತ್ತದೆಂಬುದನ್ನು ನಾವು ಮರೆಯಬಾರದು.

ಈಗ ನಾಡಿನಾದ್ಯಂತ ಯುವ ಲೇಖಕರು ತಮ್ಮ ಸೃಷ್ಟಿಶೀಲತೆಯ ಹೊಸ ಆವಿಷ್ಕಾರಗಳನ್ನು ಮಾಡುತ್ತಿದ್ದಾರೆ. ಸಾಹಿತ್ಯ ಸೃಷ್ಟಿ ಕೇವಲ ಉತ್ಸಾಹದಿಂದ ಮಾತ್ರ ಸಾಧ್ಯವಾಗುವುದಿಲ್ಲ. ಅವರು ಇಡೀ ಸಾಹಿತ್ಯ ಪರಂಪರೆ ಸಾಗಿ ಬಂದಿರುವುದರ ಬಗೆಗೆ ಆಳವಾದ ಚಿಂತನೆ, ಅಧ್ಯಯನವನ್ನು ಮಾಡಿ ತಮ್ಮ ಸೃಷ್ಟಿಶೀಲತೆಯನ್ನು ರೂಪಿಸಿಕೊಳ್ಳಬೇಕಾಗಿದೆ. ಹಿಂದಣ ಹೆಜ್ಜೆಯನ್ನು ತಿಳಿಯದೆ ಮುಂದಣ ಹೆಜ್ಜೆಯನ್ನು ಇಡಲಾಗದು. ಆದ್ದರಿಂದ ಪಂಪ, ಬಸವಣ್ಣ, ಅಲ್ಲಮ, ಕುಮಾರವ್ಯಾಸ, ರತ್ನಾಕರವರ್ಣಿ, ಪುರಂದರ – ಕನಕದಾಸರ ಅಭಿವ್ಯಕ್ತಿಗಳೊಂದಿಗೆ,

ಕುವೆಂಪು, ಬೇಂದ್ರೆ, ಕಾರಂತ, ಗೋಪಾಲಕೃಷ್ಣ ಅಡಿಗ, ಮಾಸ್ತಿ, ಕೆ.ಎಸ್. ನರಸಿಂಹಸ್ವಾಮಿ, ಜಿ.ಎಸ್. ಶಿವರುದ್ರಪ್ಪ ಪೂರ್ಣಚಂದ್ರ ತೇಜಸ್ವಿ, ಯು.ಆರ್. ಅನಂತಮೂರ್ತಿ, ಲಂಕೇಶ್, ದೇವನೂರ ಮಹಾದೇವ, ಡಾ॥ ಸಿದ್ಧಲಿಂಗಯ್ಯ, ಚಂದ್ರಶೇಖರ ಕಂಬಾರ, ತ್ರಿವೇಣಿ, ವೈದೇಹಿ, ನಿಸಾರ್ ಅಹಮದ್, ಚಂದ್ರಶೇಖರ ಪಾಟೀಲ, ಗಿರೀಶ ಕಾರ್ನಾಡ, ಅಬ್ದುಲ್ ರಶೀದ್, ನಟರಾಜ್ ಹುಳಿಯಾರ್, ಮೊಗಳ್ಳಿ ಗಣೇಶ್, ಬಾನು ಮುಷ್ತಾಕ್ ಹೀಗೆ ಇನ್ನೂ ಅನೇಕ ಮಹತ್ವದ ಲೇಖಕರ ಕೃತಿಗಳ ಅಧ್ಯಯನದಿಂದ ಸೃಷ್ಟಿಶೀಲತೆಯ ಸತ್ವ-ಶಕ್ತಿಗಳನ್ನು ತಿಳಿಯಬಹುದಾಗಿದೆ. ಸೃಷ್ಟಿಶೀಲತೆ ಕೇವಲ ಬರೆಯವರಿಗೆ ಮಾತ್ರ ಸಂಬಂಧಿಸಿದ್ದೆಂದು ತಿಳಿಯಲಾಗುವುದಿಲ್ಲ. ಸಹೃದಯರೂ ತಮ್ಮ ಸೃಷ್ಟಿಶೀಲ ಸತ್ವದಿಂದ ಒಂದು ಕೃತಿಯ ಅನುಭವವನ್ನು ರೂಪಿಸಿಕೊಳ್ಳುತ್ತಾರೆ ಎನ್ನುವುದು ಸಾಹಿತ್ಯ ಚಿಂತನೆಯಲ್ಲಿ ಮುಖ್ಯವಾದದ್ದಾಗಿದೆ. ಯಾವ ಅರ್ಥಪೂರ್ಣ ಮೌಲ್ಯಗಳಿಗೂ ಬದ್ಧವಾಗದೆ ಸಾಹಿತ್ಯ, ಸಂಸ್ಕೃತಿಗಳ ಹೆಸರಿನಲ್ಲಿ ಅನೇಕ ರಚನೆಗಳು ದೊಡ್ಡ ಪ್ರಮಾಣದಲ್ಲಿ ಪ್ರಸಾರದಲ್ಲಿರುವುದನ್ನು ನಾವು ನೋಡುತ್ತಿದ್ದೇವೆ. ಇವು ನಮ್ಮ ಮನಸ್ಸಿನಲ್ಲಿ ಉಳಿಯದೆ, ವಿಚಾರ – ಚಿಂತನೆಗೆ ಒಳಗಾಗದೆ ತತ್ಕಾಲಕ್ಕೂ ಸಲ್ಲದೆ ಆ ಕೂಡಲೇ ಜಾರಿಹೋಗುತ್ತಿವೆ. ಆದರೆ ಉತ್ತಮ ಸಾಹಿತ್ಯ, ನಾಟಕ, ಚಲನಚಿತ್ರ, ವೈಚಾರಿಕ ಬರೆಹ, ಮಕ್ಕಳ ಸಾಹಿತ್ಯವೇ ಮೊದಲಾದವುಗಳು ಹಾಗಲ್ಲ. ಅವುಗಳ ಓದು ನಮ್ಮ ಸಂದರ್ಭವನ್ನು ಗ್ರಹಿಸಲು, ಅದರಿಂದ ನಮ್ಮ ಕ್ರಿಯಾಶೀಲತೆಯನ್ನು ರೂಪಿಸಿಕೊಳ್ಳಲು, ಮತ್ತು ವಿಮರ್ಶಿಸುವ ನೆಲೆಗಳನ್ನು ಬೆಳೆಸಿಕೊಳ್ಳಲು ಪೂರಕವಾಗುತ್ತದೆ.

ಈ ಸಂದರ್ಭದಲ್ಲಿ ತಮ್ಮೊಂದಿಗೆ ಕನ್ನಡ ಭಾಷೆಯ ಬಳಕೆಗೆ ಸಂಬಂಧಿಸಿದಂತೆ ಮುಖ್ಯ ಸಂಗತಿಯೊಂದನ್ನು ಪ್ರಸ್ತಾಪಿಸಲು ಬಯಸುತ್ತಿದ್ದೇನೆ. ಅದೆಂದರೆ, ನಾವು ದಿನನಿತ್ಯ ಆಡುವ ಕನ್ನಡಕ್ಕೂ ನಾವು ಬರೆಯುವ ಕನ್ನಡಕ್ಕೂ ತುಂಬ ಅಂತರವಿದೆ. ಇದನ್ನು ಹೋಗಲಾಡಿಸುವ ಮಹತ್ವದ ಪ್ರಯತ್ನವನ್ನು ಕನ್ನಡ ಭಾಷಾಶಾಸ್ತ್ರಜ್ಞರು ಮಾಡುತ್ತಿದ್ದಾರೆ. ಅವರಲ್ಲಿ ಹಿರಿಯರೂ ಹಾಗೂ ಶ್ರೇಷ್ಠ ಭಾಷಾವಿಜ್ಞಾನಿಗಳೂ ಆದ ಡಿ.ಎನ್. ಶಂಕರಭಟ್ಟರು ಮುಖ್ಯರು. ಡಾ॥ ಕೆ.ವಿ. ನಾರಾಯಣ, ಡಾ॥ ತಾರಕೇಶ್ವರ ಮೊದಲಾದ ಭಾಷಾಶಾಸ್ತ್ರಜ್ಞರು ಕನ್ನಡ ಬರಹಕ್ಕೆ ಸಂಬಂದಿಸಿದ ಶೋಧನೆಗಳಲ್ಲಿ ತೊಡಗಿದ್ದಾರೆ.

ಡಿ.ಎನ್. ಶಂಕರಭಟ್ಟರು ಕನ್ನಡ ಬರಹ ನಮ್ಮ ಎಲ್ಲ ವರ್ಗದವರ ಸ್ವತ್ತಾಗಲು ನಮ್ಮ ಬರವಣಿಗೆಯ ಕ್ರಮದಲ್ಲಿ ಅನೇಕ ಬದಲಾವಣೆಗಳಾಗಬೇಕೆಂಬ ಅಂಶವನ್ನು ನಮ್ಮೆಲ್ಲರ ಗಮನಕ್ಕೆ ತಂದಿದ್ದಾರೆ. ಡಿ.ಎನ್. ಶಂಕರಭಟ್ಟರು 'ಕನ್ನಡ ಬರಹವನ್ನು ಸರಿಪಡಿಸೋಣ' ಎಂಬ ಕನ್ನಡಿಗರ ಕಣ್ತೆರೆಸುವ ಪುಸ್ತಕವನ್ನು ಬರೆದು ಕೆಲವು ಬದಲಾವಣೆಗಳನ್ನು ಸೂಚಿಸಿದ್ದಾರೆ. ಅವರು ಬದಲಾವಣೆಯ ಸ್ವರೂಪ ಹೇಗಿರಬೇಕೆಂಬುದನ್ನು ಹೀಗೆ ವಿವರಿಸಿದ್ದಾರೆ.

೧. ಕನ್ನಡ ಬರಹದಲ್ಲಿ ಸೇರಿಕೊಂಡಿರುವ ಹಲವು ಅವಶ್ಯವಿಲ್ಲದ ಅಕ್ಕರಗಳನ್ನು ಬೇಕಾದವರು ಮಾತ್ರ ಬಳಸುವ ಹಾಗೆ ಮತ್ತು ಬೇಡವಾದವರು ಬಿಟ್ಟುಬಿಡಲು ಸಾದ್ಯವಾಗಬೇಕು. ಇದಕ್ಕಾಗಿ ಕನ್ನಡ ಬರಹಗಳಲ್ಲಿ ಈ ಅಕ್ಕರಗಳನ್ನು ಎಲ್ಲರೂ ಬಳಸಲೇಬೇಕು ಮತ್ತು ಬಳಸದಿದ್ದಲ್ಲಿ ಅದು ಶಿಶ್ಟ ಕನ್ನಡವಲ್ಲ ಎಂಬ ನಿರ್ಬಂಧ ಇಲ್ಲವಾಗಬೇಕು. ಇದು ಕನ್ನಡ ಲಿಪಿಗೆ ಸಂಬಂದಿಸಿರುವ ಮೊದಲನೆಯ ಬದಲಾವಣೆ.

೨. ಸಾಮಾನ್ಯ ಜನರನ್ನು ತಲುಪಬೇಕಾಗಿರುವ ಕನ್ನಡ ಬರಹಗಳಲ್ಲಿ ಸಂಸ್ಕ್ರುತದಿಂದ ಎರವಲಾಗಿ ಪಡೆದ ಕನ್ನಡ ಬರಹಗಳಲ್ಲಿ ನಿಯಂತ್ರಣವಿರಬೇಕು; ಅವನ್ನು ತತ್ಸಮ ರೂಪದಲ್ಲಿ ಬಳಸುವುದಿದ್ದಲ್ಲಿ ಅವುಗಳ ಪ್ರಮಾಣ ಶೇಕಡಾ ಹತ್ತಕ್ಕಿಂತ ಜಾಸ್ತಿ ಆಗಬಾರದು. ಇದು ಕನ್ನಡ ಪದಗಳಿಗೆ ಸಂಬಂದಿಸಿದ ಎರಡನೆಯ ಬದಲಾವಣೆ.

೩. ಕನ್ನಡ ಬರಹದಲ್ಲಿ ಅತಿಯಾಗಿ ಸಂಸ್ಕುತ ಪದಗಳನ್ನು ಬಳಸುತ್ತಿರುವುದರ ಬಗ್ಗೆ : ಪದಗಳ ಉಚ್ಚಾರಣೆ ಹೇಗೆಯೇ ಇರಲಿ, ಅವನ್ನು ಸಂಸ್ಕ್ರುತದಲ್ಲಿರುವ ಹಾಗೆಯೇ ಕನ್ನಡದಲ್ಲೂ ಬರೆಯಬೇಕೆಂಬ ನಿಯಮವನ್ನು ಮಾಡಿರುವುದು ಮತ್ತು ಅದಕ್ಕಾಗಿ ಹಲವು ಹೆಚ್ಚಿನ ಅಕ್ಕರಗಳನ್ನು ಕನ್ನಡ ಲಿಪಿಯಲ್ಲಿ ಉಳಿಸಿಕೊಂಡಿರುವುದು ಒಂದು ಸಮಸ್ಯೆ. ಈ ಕಾರಣಗಳಿಂದಾಗಿ ಕನ್ನಡ ಬರಹ ಇವತ್ತು ಸಾಮಾನ್ಯ

ಕನ್ನಡಿಗರಿಂದ ದೂರವೇ ಉಳಿದಿದೆ. ಅದು ಎಲ್ಲರ ಸೊತ್ತಾಗಬೇಕಿದ್ದಲ್ಲಿ ಮೇಲಿನ ತೊಂದರೆಗಳನ್ನು ನಿವಾರಿಸುವುದು ಅವಶ್ಯ. ಸಂಸ್ಕೃತ ಪದಗಳ ಬಳಕೆಯನ್ನು ಆದಷ್ಟು ಕಡಿಮೆ ಮಾಡಬೇಕು. ಮತ್ತು ಬಳಸುವುದಿದ್ದರೂ ಅವನ್ನು ಉಚ್ಚಾರಣೆಯಲ್ಲಿರುವ ಹಾಗೆಯೇ ಬರೆಯಲು ಸಾದ್ಯವಿರಬೇಕು. ಹಾಗೆ ಮಾಡಿದಲ್ಲಿ, ಕನ್ನಡ ಬರಹವನ್ನು ಕಲಿಯಬೇಕೆಂದಿರುವವರಿಗೆ ಸುಮಾರು ಹದಿನಾರು ಅಕ್ಶರಗಳನ್ನು ಕಲಿಸಬೇಕಾಗುವುದಿಲ್ಲ.

(ಹತ್ತು ಮಹಾಪ್ರಾಣಾಕ್ಷರಗಳು, ಋಕಾರ, ಷಕಾರ, ಐ-ಔ, ವಿಸರ್ಗ ಮೊದಲಾವುಗಳು)

ಡಿ.ಎನ್.ಎಸ್. ಅವರ ಮುಖ್ಯ ನಿಲುವುಗಳು ಹೀಗಿವೆ: ''ಕನ್ನಡ ಬರಹ ಇವತ್ತು ಒಂದು ಸಂಧಿಕಾಲವನ್ನು ಎದುರಿಸುತ್ತಿದೆ. ಕರ್ನಾಟಕದ ಮೇಲ್ವರ್ಗದ ಮಕ್ಕಳಿಗೆಲ್ಲ ಈಗಾಗಲೇ ಅದು ಅನವಶ್ಯವಾಗಿದೆ. ಬರಹದ ಮೂಲಕ ಎಂತಹ ಪ್ರಯೋಜನಗಳನ್ನೆಲ್ಲ ಪಡೆಯಲು ಸಾಧ್ಯವೋ ಅವನ್ನೆಲ್ಲ ಇಂಗ್ಲಿಶ್ ಬರಹದ ಮೂಲಕವೇನೇ ಅವರು ಈಗ ಪಡೆಯಬಲ್ಲವರಾಗಿದ್ದಾರೆ. ಕನ್ನಡ ಬರಹ ವಿದ್ವಾಂಸರ ಸೊತ್ತಾಗಿ ಮಾತ್ರವೇ ಉಳಿಯದೆ ಎಲ್ಲರ ಅವಶ್ಯಕತೆಗಳನ್ನೂ ಪೂರೈಸುವ ಸಾಧನವಾಗಲು ನಾವು ಏನು ಮಾಡಬೇಕು ಎಂಬ ಬಗ್ಗೆ ಚಿಂತಿಸಬೇಕಾಗಿದೆ''. ಈ ಎಲ್ಲ ಅಂಶಗಳನ್ನು ಶಂಕರಭಟ್ಟರು ಆಳವಾದ ಅಧ್ಯಯನ - ಶೋಧನೆಗಳ ಮೂಲಕ ತೋರಿಸಿದ್ದಾರೆ.

ಈ ಅಂಶವನ್ನು ನಾವೀಗ ಅತ್ಯಂತ ಗಂಭೀರವಾಗಿ ಸ್ವೀಕರಿಸಿ ವಿಚಾರ ಮಾಡಿ ಪ್ರಯೋಗಶೀಲರಾಗಬೇಕಾಗಿದೆ. ಇದು ಕನ್ನಡ ಬರಹವನ್ನು ಗಟ್ಟಿಗೊಳಿಸುವ ಪ್ರಯತ್ನವಾಗುವುದರೊಂದಿಗೆ ಕನ್ನಡವನ್ನು ಓದಲು ಎಲ್ಲರೂ ಮುಂದಾಗಲು ತಕ್ಕ ವಾತಾವರಣವನ್ನು ನಿರ್ಮಿಸಿದಂತಾಗುತ್ತದೆ. ಇಂಥ ಹೊಸ ಶೋಧವನ್ನು ಜಡ ನಿಲುವುಗಳಿಗೆ ಬದ್ಧರಾಗದೆ ಪ್ರಗತಿಪರ ದೃಷ್ಟಿಯಿಂದ ಸ್ವೀಕರಿಸುವ ಅಗತ್ಯವಿದೆ. ಈ ನಿಟ್ಟಿನಲ್ಲಿ ಪತ್ರಕರ್ತರು, ಶಾಲಾ ಕಾಲೇಜುಗಳ ಅಧ್ಯಾಪಕರು, ವಿದ್ಯಾರ್ಥಿಗಳು, ಪ್ರೀತಿವಂತ ಕನ್ನಡ ಭಾಷಿಕರು ಆಸಕ್ತಿ ತೋರಬೇಕಾಗಿದೆ.

ಒಟ್ಟಿನಲ್ಲಿ, ಕನ್ನಡನಾಡಿನ ಭಾಷೆ - ಸಂಸ್ಕೃತಿಗಳ ಬಿಕ್ಕಟಿನಲ್ಲಿ ಈ ಸಂಧಿಕಾಲದಲ್ಲಿ ನಾವೆಲ್ಲರೂ ಕನ್ನಡ ಭಾಷೆಯ ಆಧುನೀಕರಣ, ಕಲಿಕೆಯ ವಾತಾವರಣದ ಅರ್ಥಪೂರ್ಣತೆ ಹಾಗೂ ಸಾಮಾಜಿಕ ನ್ಯಾಯದ ನಿರಂತರ ಜಾರಿಗೆ ಬದ್ಧರಾಗಿ ಮುನ್ನಡೆಯಬೇಕಾಗಿದೆ.

❑

**೧೦, ೧೧ ಜೂನ್ ೨೦೦೬ರಂದು ಬೇಲೂರು ತಾಲ್ಲೂಕು ಹಳೇಬೀಡು ಹತ್ತಿರ ಪುಷ್ಪಗಿರಿಯ ಶ್ರೀ ಪುಷ್ಪಗಿರಿ ಮಹಾಸಂಸ್ಥಾನ ಶ್ರೀ ಮಠದಲ್ಲಿ ನಡೆದ ಹಾಸನ ಜಿಲ್ಲೆಯ ೯ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣ.**

ಪ್ರಿಯ ಹರಿಹರಪ್ರಿಯ ಅವರಿಗೆ ಸಸ್ನೇಹ ವಂದನೆಗಳು.

ನಮ್ಮಲ್ಲಿ ಸಾಹಿತ್ಯ ಸಂಸ್ಕೃತಿಯ ಕಿರುಪತ್ರಿಕೆಗಳು ಕಮ್ಮಿ. ಇರುವಂತಹ ಕೆಲವಕ್ಕೆ ಕಮ್ಮಿ ಸಂಖ್ಯೆಯ ನಾವುಗಳೇ ಚಂದಾ ನಿಯಮಿತವಾಗಿ ಕಳುಹಿಸದಿದ್ದರೆ ನಡೆಸುವವರಿಗೆ ತುಂಬಾ ಕಷ್ಟ. ಕಂಡಾಗ ಕಿಸೆಯಲ್ಲಿ ದುಡ್ಡಿಲ್ಲದೆಯೋ, ಆಮೇಲೆ ಮನಿ ಆರ್ಡರ್ ಮಾಡಲು ಉದಾಸೀನ, ಹೀಗೆ ನಾನಾ ಕಾರಣಗಳಿಂದ ಚಂದಾ ಮುಂದೆ ಹೋಗುತ್ತಲೇ ಇರುತ್ತದೆ. ಮೊನ್ನೆ ನೀವು ಮಲ್ಲೇಶ್ವರಂನಲ್ಲಿ ಕಂಡಾಗಲೂ ಹಾಗೆ. ಕೊಡಲು ಕಿಸೆಯಲ್ಲಿ ೫೦೦ರೂ. ನಗದು ಇಲ್ಲ.

ಈ ಸಲ ನೆನಪಿಟ್ಟು ಭಾನುವಾರ ಬೆಳಿಗ್ಗೆ ಕೂತು ಬರೆಯುತ್ತಿದ್ದೇನೆ. ಇದರ ಜೊತೆ ರೂ. ೧,೦೦೦/- ಚೆಕ್ ಇದೆ. ನಿಮ್ಮ ಹಿಂದಿನ ಪತ್ರಿಕೆಗಳನ್ನು ನಾನು ಸ್ನೇಹಿತರ ಮೂಲಕ ಗಮನಿಸುತ್ತಾ ಇದ್ದೆ. ನಾಗರತ್ನಮ್ಮ ಬಗ್ಗೆ ಡಿ.ವಿ.ಜಿ. ಬರೆದುದನ್ನು ಮೂಲದಲ್ಲಿ ಓದಿದ್ದೆ. ಆದರೆ ಇನ್ನೊಮ್ಮೆ ಹೊಸತಾಗಿ ಪತ್ರಿಕೆ ಮೂಲಕ ಕಣ್ಣಿಗೆ ಬಿದ್ದು ಮತ್ತೊಂದು ಲೋಕ ಪುನಃ ತೆರೆಯುತ್ತದೆ.

ದಯವಿಟ್ಟು ಈ ರೂ. ೧,೦೦೦/- ಚೆಕ್ ಸ್ವೀಕರಿಸಿ, ಪತ್ರಿಕೆಯನ್ನು ಕಳುಹಿಸುತ್ತಿರಿ. ಇದನ್ನು ಮುಂದಿನ ವರುಷಗಳ ಚಂದಾಗಳಿಗೂ ಜಮ ಮಾಡಿಕೊಂಡು ಪತ್ರಿಕೆ ಕಳುಹಿಸಿ.

***ಬೆಂಗಳೂರು*** ***ವಿಜಯ ಶಂಕರ ಎಸ್.ಆರ್.***

# ಸಮುದಾಯ ಎಚ್ಚರಿಸುವ ಸಾಹಿತ್ಯ

## ಪಂಡಿತ ತಾರಾನಾಥ

ನಾನು ಸಾಹಿತ್ಯದಲ್ಲಿ ನುರಿತವನಲ್ಲ. ಬರೆಹವು ಹಳೆಯದಾಗಿದೆ ಎಂಬದಕ್ಕಾಗಿ ಮಾತ್ರ ಅದು ಸಾಹಿತ್ಯವೆಂದು ಹೇಳುವವರಲ್ಲಿ ನಾನಿಲ್ಲ. ಹಾಳೆಗಳು ಹಳೆಯವಾದೊಡನೆ ಪ್ರಾಚೀನ ಉಚ್ಚತ್ತವು ಸಾಹಿತ್ಯವದೆನ್ನಲಿಕ್ಕೆ ವಿವೇಕವು ಒಪ್ಪುವುದಿಲ್ಲ. ಬರೆಯ ಮಾತ್ರಾಗಣಯತಿಪ್ರಾಸಗಳ ಸಮೂಹಕ್ಕೂ ನಾನು ಕಾವ್ಯವೆಂದು ಒಪ್ಪುವುದಿಲ್ಲ. ಅದು ಹಳೆಯದೇ ಆಗಲಿ ಹೊಸದೇ ಆಗಲಿ ಬರಹಕ್ಕೆ ಸಾಹಿತ್ಯವೆನ್ನಬೇಕಾದರೆ ಅದು ವ್ಯಷ್ಟಿ ಸಮಷ್ಟಿಗಳ ಭಾವತತ್ತ್ವಸಹಿತವಾಗಿ ಹೊರ ಹೊಮ್ಮಬೇಕು. ಪರಿಸ್ಥಿತಿಯು ನೈಸರ್ಗಿಕವಾಗಿಯೇ ಇರಲಿ ಅಥವಾ ನಾಗರಿಕವಾಗಿಯೇ ಇರಲಿ, ಅದು ಕವಿಯ ಹೃದಯವನ್ನು ಎಲ್ಲಿ ಹೇಗೆ ಮುಟ್ಟಿದೆ, ಆಸ್ಪರ್ಶದಿಂದೆಚ್ಚೆತ್ತ ಹೃದಯದ ತರಂಗಗಳು ಏರಿ ಹೊರಳುತ್ತ ವಿವೇಕ ಸಾಮ್ರಾಜ್ಯವನ್ನು ತಟ್ಟಿ ತೆರೆದು ಹೇಗೆ ಅದರ ದರ್ಶನವನ್ನು ಜಗತ್ತಿಗೆ ತೋರಿಸುತ್ತಿದೆ ಎಂಬದು ಕಾವ್ಯವನ್ನು ಓದಿದರೆ ಇಲ್ಲವೆ ಕೇಳಿದರೆ ಹೊಳೆಯಬೇಕು. ಹೃದಯದ ಉದ್ಗಾರದಲ್ಲಿ ತತ್ತ್ವದ ಧ್ವನಿಯಿರಬೇಕು. ಈ ರೀತಿಯಿಂದಲೇ ನಿಜವಾದ ಕ್ರಾಂತಿಯಾಗುವುದು, "ಕವಯಃ ಕ್ರಾಂತಿ ದರ್ಶನಃ" ಎಂದು ಶಂಕರಾಚಾರ್ಯರು ಟೀಕಿಸಿದ್ದಾರೆ. ಈ ದೃಷ್ಟಿಯಿಂದ ನೋಡಿದರೆ ಕಾವ್ಯವು ಗದ್ಯದ ಘನಮಿಂಚಿನ ಕಣವಾಗಿರಬೇಕು, ಗದ್ಯದ ಹೆಣವಾಗಿರಕೂಡದು.

ಈಗ ಕರ್ನಾಟಕದಲ್ಲೆಲ್ಲಿ ನೋಡಿದರೂ ಕವಿತೆಯ ಸುಗ್ಗಿ. ಇದರಿಂದ ಕವಿಗಳು ಹೆಚ್ಚಾಗುತ್ತಿದ್ದಾರೆ ಎನ್ನಬಹುದೋ ? ಇಲ್ಲೀ ಹೊತ್ತೇ ನೋಡಿದರೆ ಒಂದು ಗದ್ಯಕ್ಕೆ ಇಪ್ಪತ್ತಕ್ಕೆ ಮೀರಿ ಪದ್ಯಗಳಿವೆ. ಈ ಸುಗ್ಗಿಯ ಕಾರಣವೇನು ? ಇದು ಕನ್ನಡಿಗರ ಬುದ್ಧಿಯು ಕಣಕಟ್ಟಿ ಮಿಂಚುವುದರ ಲಕ್ಷಣವೆನ್ನಬೇಕೋ ? ಅಥವಾ ಬುದ್ಧಿಯ ಕಳಿವಾಣದ ಕಾರಣ ಪರಿಣಾಮಯುತ ನಿಯಮಗಳನ್ನು ತಪ್ಪಿಸಿಕೊಳ್ಳುವ ಸುಲಭ ರೀತಿಯಿದೆನ್ನಬೇಕೋ? ಜಗತ್ತಿನ ಇತಿಹಾಸವು ಯಾವಾಗಲೂ ಉಚ್ಚತರ ಕಾವ್ಯವನ್ನು ನಿರ್ಭಯ ನಿರ್ದಾಕ್ಷಿಣ್ಯ ವಿಮರ್ಶಾಯುಗದ ನಂತರವೇ ಮಾಡಿದಂತೆ ತೋರಿಸುತ್ತದೆ. ಅಥವಾ ಕಾವ್ಯದಲ್ಲಿಯೇ ಅಂಥ ವಿಮರ್ಶೆಯ ತೀಕ್ಷ್ಣತೆಯನ್ನೂ ಜಾಗ್ರತೆಯನ್ನೂ ಇಡುತ್ತದೆ. ನಮ್ಮಲ್ಲಿ ಹಾಗಿದೆಯೋ ? ಸಶಾಸ್ತ್ರ ವಿಮರ್ಶೆಯ ಶಕ್ತಿಯು ಪತ್ರಪತ್ರಿಕಾಕಾರರಲ್ಲಿ ಸಹ ಅಪರೂಪವೇ. ತಮ್ಮ ಹುಚ್ಚು ಮೆಚ್ಚೇ ಅನೇಕರಿಗೆ ವಿಮರ್ಶೆಯೆಂದರೆ ! ಸ್ವತಂತ್ರ ವಿಚಾರಕ್ಕೆ ಪ್ರತಿಭಟನವೇ ಹೆಚ್ಚೆಲ್ಲಿ ನೋಡಿದರೂ. ಇಂಥ ತಲೆಗಳಲ್ಲಿ ವಿಮರ್ಶೆಯಿದೆಯೆನ್ನಬಹುದೋ ? ಮತ್ತೆ, ಈಗ ಹೊರಬೀಳುವ ಕವಿತೆಗಳಲ್ಲಿಯೇ ವಿಮರ್ಶಾದೃಷ್ಟಿಯಾದರೂ ಉತ್ಕ್ರಾಂತಿಯ ಉಸಿರಾದರೂ ಇದೆಯೋ? ಅಪರೂಪವಾಗಿ ಎಲ್ಲಿಯೋ ಒಂದು ಕಡೆಯಿದ್ದರೆ ಅದು ಮತ್ತೂ ನನ್ನ ಪಕ್ಷಕ್ಕೇ ರುಜು ! ಹೀಗಿರುವಾಗ ಈ ಕವಿತೆಗಳ ವಿಷಯವೇನು? ಗಮ್ಯವೇನು ? ತಿರುಳೇನು ? ಗದ್ಯದ ಯುಕ್ತಿ, ನ್ಯಾಯ, ನಿಮಿತ್ತ ನೈಮಿತ್ತಿಕ ಪ್ರಸಂಗಗಳ ಜವಾಬ್ದಾರಿಯಿಂದ ತಪ್ಪಿಸಿಕೊಳ್ಳುವುದೇ ಈಗಿನ ಅನೇಕ ಕವಿತೆಗಳ ಉದ್ದೇಶವೆಂದು ನನಗೆ ಕಾಣುತ್ತದೆ. "ಹೊಸ ಹುರುಪು ಹೊಸ ಹುರುಪು" ಎಂಬದು ಎಲ್ಲೆಲ್ಲಿಯೂ ಕೇಳಿಬರುತ್ತದೆ. ಆದರೆ ಹೊಸ ವಿಚಾರವಿಲ್ಲದೆ ಹೊಸ ಹುರುಪೆಲ್ಲಿಂದ ಬರಬೇಕು ? ಹಳೆಯದನ್ನೇ ಯತಿಪ್ರಾಸದಿಂದ ಜೋಡಿಸಿದರೆ ಕವಿತೆಯಾಗಲಾರದು. ಪದ್ಯವು ಗದ್ಯವನ್ನು ಮೀರುವಂಥದ್ದಾಗಿರಬೇಕು, ಗದ್ಯದ ಕಟ್ಟಳೆಗಳನ್ನೂ ಹೊಣೆಗಾರಿಕೆಗಳನ್ನೂ ತಪ್ಪಿಸಿಕೊಳ್ಳುವಂಥಾ ಪ್ರಾಸಗಳು ವಿಚಾರಕ್ಕೆ ತ್ರಾಸ ಶಕ್ತಿಯ ಹ್ರಾಸವೇ ಸರಿ.

ಮೇಲೆ ಈಗ ಹೊರಡುವ ಕವಿತೆಗಳ ಧ್ವನಿಯೇನು ? ನಿಂದಾಸ್ತುತಿ – ಇವೆರಡೇ ನನಗೆ ವಿಶೇಷಾಗಿ ಕಂಡು ಬರುವುವು. ಹಿಂದಿನ ಸಾಮಾನ್ಯ ಸಾಹಿತ್ಯದಲ್ಲಿ ಅಸುರರ ನಿಂದೆ ದೇವರ ಸ್ತುತಿ ಈಗಲಾದರೋ ಬ್ರಿಟಿಷರ ನಿಂದೆ, ಗಾಂಧೀಜಿ ಕಾಂಗ್ರೆಸ್‌ನ ಸ್ತುತಿ. ಅಂತೂ ಇಂತೂ ಪ್ರಾಚೀನ ಮಾನವನ ಅನಾಗರಿಕ ಗುಣವೇನೋ ಸಾಹಿತ್ಯ ಗೃಹದ ಹೃದಯದಲ್ಲಿ ಇನ್ನೂ ಇದೆ. ಇದಕ್ಕೆ ಸಾಹಿತ್ಯವೆಂದರೆ ಬಹು ಚಿಲ್ಲರೆ ಸಾಹಿತ್ಯವೆನ್ನಬೇಕಾಗುವುದು. ಇದು ಪ್ರಚಾರಕ

ಸಾಹಿತ್ಯ ಎನ್ನಬಹುದು. ಬರೆಯ ನಿಂದಾಸ್ತುತಿಗಳು ಉಚ್ಚ ಮನಸ್ಸಿನ ಲಕ್ಷಣಗಳಲ್ಲ.

ಮಕ್ಕಳನ್ನು ಬೆಳೆಯುತ್ತಿರುವಂತೆ ಚನ್ನಾಗಿ ದಿಟ್ಟಿಸಿ ಅವುಗಳ ತನುಮನಸ್ಸುಗಳ ವ್ಯಾಪಾರವನ್ನ ನೋಡೋಣ. ಅವುಗಳ ಸಾರವನ್ನು ಗ್ರಹಿಸಿಕೊಳ್ಳೋಣ. ಯಾಕೆಂದರೆ ಅವುಗಳ ಚಿತ್ತ ವಿಕಾಸದಂತೆಯೇ ಪ್ರಾಚೀನ ಮಾನವನ ಮನೋ ವಿಕಾಸವೂ ಮಕ್ಕಳು ಮೊದಲು ತಮಗೆ ಗೊತ್ತಿರುವ ಕೆಲವು ಶಬ್ದಗಳನ್ನೇ ಪೋಣಿಸಿಕೊಂಡು ಪ್ರಾಸಹಚ್ಚಿಕೊಂಡು ಲಯದಿಂದ ಹೇಳುತ್ತವೆ. ಅಮ್ಮ ಗಿಮ್ಮ ಕರ್ಮ - ಕೊಮ್ಮ - ಮುಂತಾದ ಪ್ರಾಸಗಳನ್ನು ಅವು ತಾವೇ ಹೇಳಿಕೊಂಡು ಪುನಶ್ಚರಣದಿಂದ ಮತ್ತಾಗಿ ಹೋಗುವವು. ಮಾನವ ಜಾತಿಯು ಈ ಚಿಕ್ಕ ವಯಸ್ಸಿನಲ್ಲಿದ್ದಿದ್ದಾಗ ಅದರ ಸಾಹಿತ್ಯದಲ್ಲಿ ಈ ಲಕ್ಷಣವನ್ನು ತುಂಬಾ ಕಾಣಬಹುದು. ಈಗಲೂ ಎಷ್ಟೋ ಪ್ರಾಚೀನ ಜನಾಂಗಗಳು ಇಂಥ ಅನಾಗರಿಕಸ್ಥಿತಿಯಲ್ಲಿವೆ. ಇಂಥವರ ಕಾವ್ಯವು ಪ್ರಮಾದಕವಾಗಿಯೂ ಪ್ರಮೋದಕವಾಗಿಯೂ ಇದೆ. ಇದರಲ್ಲಿ ವಿಧವಿಧವಾದ ಭಯಾನಕ ರೌಚಕ ಕಥೆಗಳೂ ಇವೆ. ಇತರ ವೈರಿಸಂಘಗಳ ಮತ್ತವರ ದೇವತೆಗಳ ನಿಂದೆಯನ್ನೂ, ಮಿತ್ರಸಂಘದವರ ಮತ್ತು ದೇವತೆಗಳ ಸ್ತುತಿಯನ್ನೂ ಧಾರಾಳವಾಗಿ ಕಾಣಬಹುದು. ತಮ್ಮ ಒಕ್ಕಟ್ಟನ್ನು ಬೆಳೆಸುವುದಕ್ಕಾಗಿ ಮತ್ತು ವೈರಿಗಳನ್ನು ಧಿಕ್ಕರಿಸುವುದಕ್ಕಾಗಿ ಸಾಕಷ್ಟು ಪ್ರಚಾರಕ ರೀತಿ ನೀತಿಗಳು ಬರಬರುತ್ತ ಬೆಳೆಯುತ್ತವೆ. ಈಗ ಸಾಹಿತ್ಯವು ಬೇರೆ ಹಾದಿಯನ್ನು ಹಿಡಿಯುತ್ತದೆ. ಈ ಭಾವವನ್ನು ಮಕ್ಕಳಲ್ಲಿಯೂ ನೋಡಬಹುದು. ಈಗ ತಮ್ಮ ಸಂಘಕ್ಕೆ ಅದರ ಒಕ್ಕಟ್ಟಿಗಾಗಿ ಬೋಧಿಗಳು ಉಂಟಾಗುತ್ತವೆ. ಆ ಬೋಧವನ್ನು ಆಚರಣದಲ್ಲಿಡುವುದಕ್ಕಾಗಿ ಸಂಘದ ಮುಂದಾಳುಗಳು ಮಾನಾವಮಾನಗಳನ್ನೇರ್ಪಡಿಸಿರುತ್ತಾರೆ. ಇಷ್ಟೇ ಅಲ್ಲ ಆ ಕಟ್ಟಳೆಗಳನ್ನ ಪ್ರೀತಿಸುವ ಮತ್ತು ಅವುಗಳ ಅವಿಧೇಯತೆಯನ್ನು ದ್ವೇಷಿಸುವ ದೇವದೇವತೆಗಳೂ, ಸ್ವರ್ಗ ನರಕಗಳೂ ರಚಿಸಲ್ಪಡುತ್ತವೆ. ಇವುಗಳ ಬೆಂಬಲಕ್ಕಾಗಿ ಅನೇಕ ಬೋಧಗಳುಂಟಾಗುತ್ತವೆ. ಇದು ಪ್ರಬೋಧಕ ಸಾಹಿತ್ಯ . ಇದರಲ್ಲಿ ತಾತ್ಕಾಲಿಕ ಸಂಘಹಿತವಿದೆ. ಇದರ ಎಲ್ಲಿಯೋ ಕೆಲವು ಬೋಧಗಳು ಬಹುಕಾಲ ಕೆಲಸಕ್ಕೆ ಬರಲೂಬಹುದು. ಆದರೆ ಇವುಗಳಿಗೆ ಶುದ್ಧ ದೇಶವರ್ತಮಾನಾತೀತ ತತ್ತ್ವಗಳ ಆಧಾರವಿಲ್ಲದೆ ಇರೋಣದರಿಂದ ಇವು ತ್ರಿಕಾಲವೂ ನಡೆಯಲಾರವು. ಇವುಗಳಿಂದ ಜನತೆಯ ಭಯ ಕುಹನಗಳೇ ಬರಬರುತ್ತ ಬೆಳೆಯುತ್ತವೆ ಹೊರತು ವಿಚಾರ ವಿಮರ್ಶೆಗಳು ಉದಯಿಸುವುದಿಲ್ಲ. ಇಂಥ ಮನೋಗತಿಯಿಂದ ಹೊಸಹೊಸಕಾಲಕ್ಕೆ ತಕ್ಕ ವಿಚಾರ ಸಮಾಯೋಗ ಶಕ್ತಿಗಳು ಜನತೆಯಲ್ಲಿ ಹುಟ್ಟುವುದಿಲ್ಲ . ಇದರಿಂದ ಹೆಚ್ಚಿನ ಪ್ರಾಪಂಚಿಕ ಜ್ಞಾನವಿದ್ದವರಿಗೆ ಇವರು ದಾಸರಾಗಿ ಹೋಗುತ್ತಾರೆ . ಇವರ ಮೂಢ ಬುದ್ಧಿಯು ಇವರಲ್ಲಿ ಇಲ್ಲಸಲ್ಲದ ಕಲ್ಪನೆಗಳನ್ನೂ ಸಮಾಧಾನಗಳನ್ನೂ ಉಂಟು ಮಾಡಿ, ಪುರಾತನ ಬೋಧಪ್ರಿಯರು ದಾಸ್ಯಕ್ಕೇ ದೇವರ ಆಶೀರ್ವಾದವೆಂದೂ ಮುಕ್ತಿಯ ಪೀಠಿಕೆಯೆಂದೂ ತಿಳಕೊಳ್ಳುತ್ತಾರೆ. ಹೊತ್ತಿಗೆ ಸರಿಯಾಗಿರದ ಪ್ರಬೋಧಕ ಸಾಹಿತ್ಯದಿಂದ ಉಂಟಾಗುವ ದುಃಸ್ಥಿತಿಯೆಂದರೆ ಹೀಗಿದೆ . ನಮ್ಮಲ್ಲಿಂಥ ಸಾಹಿತ್ಯದ ಸುಗ್ಗಿಯೇ ಸರಿ. ಅನೇಕ ಶತಮಾನಗಳ ಹಿಂದಿನ ಸ್ಮೃತಿಗಳಿಗೂ ಧರ್ಮ ಸೂತ್ರಗಳೂ ನಮಗಿನ್ನೂ ಆಧಾರಗಳೇ ! ಈ ಕಾಲ ಹೇಗೂ ಇರಲಿ, ಬೆಳಕು ಹಿಂದಿನಿಂದಲೇ ಬರಬೇಕು ! ಇದು ಬಹುಕಾಲದಿಂದ ವಿಚಾರವಿಮರ್ಶೆಗಳಿಲ್ಲದೆ ಬೋಧಬದ್ಧವಾದ ಮನಸ್ಸಿಗೆ ತಟ್ಟಿರುವ ಮೌಢ್ಯದ ಲಕ್ಷಣ. ನಿಜವಾದ ಸಾಹಿತ್ಯವು ಪ್ರಚೋದಕವಾಗಿರಬೇಕು. 'ಧೀಯೋಯೋನಃ ಪ್ರಚೋದಯಾತ್' ಅಲ್ಲವೆ ನಮ್ಮ ಬೇಡಿಕೆ ? ಆ ಸೂರ್ಯನಾರಾಯಣನಿಂದಲೂ ಆರ್ಯನು ಬೇಡುವುದೆಂದರೆ ಪ್ರಚೋದಕ ಶಕ್ತಿ. ಅಲ್ಲದೆ ಬೋಧವಲ್ಲ . ಈ ನಮ್ಮ ಗಾಯತ್ರಿಯಂಥ ಉತ್ಕೃಷ್ಟ ಕಾವ್ಯದ ತಿರುಳು ನಮ್ಮ ಸಾಹಿತ್ಯದಲ್ಲಿ ಸೇರಿದೆಯೋ ? ಸೇರುತ್ತಿದೆಯೋ ? ಅದು ಸೇರಬೇಕಾದರೆ ಕವಿಯು ಜನರ ಮನೋರಂಜನೆಯ ಅಲ್ಪವೃತ್ತಿಯನ್ನು ಮೊದಲು ಬಿಡಬೇಕು. ಅರಿತಾಗಲಿ ಅರಿಯದೆಯಾಗಲಿ ಜನಪ್ರಿಯ ರೂಢಿ ಸಂಪ್ರದಾಯಗಳನ್ನು ಹೊಸ ಹೊಸ ಭೌತಿಕ ಮುಂತಾದ ಶಾಸ್ತ್ರಗಳ ಸಹಾಯದಿಂದ ಸಲುವಳಿಸಿ, ಮುಂದಿಡುವ ಷಂಢಮಾರ್ಗವನ್ನು ಕವಿಯು ಬಿಡಬೇಕು. ಕವಿಕಂಡದ್ದನ್ನು ರವಿ ಕಂಡಿಲ್ಲ - ಎಂದು ಅನೇಕರ ಬಾಯಿಯಿಂದ ಕೇಳಬಹುದು, ಆದರೆ ಈ ನುಡಿಯು ಕವಿಯ ಸ್ತುತಿಯಲ್ಲಿ ಪ್ರಶಂಸೆಯಿಲ್ಲ, ಆತನಿಗೆ 'ಎಚ್ಚರಿಕೆ' ಇದು. ರವಿಯ ರಶ್ಮಿಯು ಇದ್ದ ವಸ್ತುವಿನ ಸ್ಥೂಲರೂಪದ ಮೇಲೆ ಮಾತ್ರ ಬೀಳುವುದು. ಕವಿಯ ದೃಷ್ಟಿಯಾದರೋ ಅದರ ಮೂಲ ಮತ್ತು ಪರಿಣಾಮಗಳನ್ನೂ ಅಂದರೆ ಭೂತ ಭವಿಷ್ಯಗಳನ್ನೂ , ಗುಣದೋಷಗಳನ್ನೂ ಒಂದೇಟಿಗೆ

ಕಂಡುಹಿಡಿತಕ್ಕದ್ದಾಗಿರಬೇಕು. ವಸ್ತುರೂಢಿ ಇತ್ಯಾದಿಗಳನ್ನು ವರ್ಣಿಸುವಾಗ ಅವುಗಳ ಗರ್ಭ ಗಮ್ಯಗಳನ್ನು ಹೊಳೆಸಿಬಿಡುವುದೇ ಕಾವ್ಯದ ಧ್ವನಿ. ಹೀಗಿದ್ದರೇ ಕವಿಯು 'ಹೆಚ್ಚಾಗಿ ಕಾಣುತ್ತಾನೆ' ಎಂದೆನ್ನಬಹುದು. ಹೀಗೆ ಧ್ವನಿಸುವುದರಲ್ಲಿಯೇ ಹೊಸ ಹೊಸ ಶಬ್ದಗಳ ಹೊಸ ಹೊಸ ಅಲಂಕಾರಗಳ ಉದಯವಾಗುತ್ತದೆ. ಹಳೆಯ ಅಲಂಕಾರಗಳನ್ನೇ ಮತ್ತೆ ತನಗನುಕೂಲವಾಗುವಂತೆ ಪೋಣಿಸಿ ಕೆಲವು ಪ್ರಾಸಬದ್ಧ ಶಬ್ದಗಳನ್ನು ಬರೆಯುವವನು ಕವಿಯಾಗುವನೋ ? ನಮ್ಮಲ್ಲಿಯ ಕವಿತೆಗಳ ಪೈರು ನೋಡಿದರೆ ಬಂಡಿಗಟ್ಟಲೆಯಾಗಿದೆ. ಆದರೆ ಅವುಗಳ ರೂಪ ರಚನೆಗಳನ್ನು ಮರೆತು, ಹೊಸ ಶಬ್ದಗಳನ್ನೂ ವಿಚಾರಗಳನ್ನೂ ಅಲಂಕಾರಗಳನ್ನೂ ಹೆಕ್ಕಲುಪಕ್ರಮಿಸೋಣ. ಬರತಕ್ಕ ಫಲ ಅಂದರೆ ಏರಂಡಫಲವೇ ಸರಿ. ಇಂಥ ಕವಿತೆಯಿಂದೇನುಪಯೋಗ ? ಇದು ತಲೆಹರಟೆ. ಒರೆ ಬೇಸರಿಕೆ. ಹೊಸ ವಿಚಾರಾಲಂಕಾರ ರಚನೆಗಳೆಲ್ಲಿಲ್ಲವೋ ಅಲ್ಲಿ ಕವಿತೆಯೆಂದರೆ ಹೊತ್ತು ಹೋಗದವರ ಸೊತ್ತು ಎನ್ನಬೇಕು. ಇಲ್ಲಿ ನಾನು ಶ್ರೀ॥ ಪಟ್ಟೇದ ಬಸಪ್ಪನವರ ಪ್ರಶಂಸೆಯನ್ನು ಮಾಡುವುದು ಅವಶ್ಯಕವೆಂದು ನನಗೆ ತೋರುತ್ತದೆ. ಅವರು ಬರೆದ ಪ್ರೌಢ ಷಟ್ಪದಿಯನ್ನು ಅವರು ಬಹು ದೀನರಾಗಿ ನಿಮ್ಮ ಮುಂದಿಟ್ಟಿರುತ್ತಾರೆ. ಯಾಕೋ ಕಾಣೆ!

---

## ಪ್ರೌಢ ಷಟ್ಪದಿಯ ಲಕ್ಷಣಂ

ಹೊಸತೆನಿಸುವ ಪ್ರೌಢಷಟ್ಪದಿ ರಾಜಿಪುದು।
ಮಿಸುಗುವಿತರ ಷಟ್ಪದಿಗಳಂತಾದೊಡಣ।
ಮೆಸೆವವು ಗಣಗಳಿಗೆ ಮಾತ್ರೆಗಳೋಳಿಯಿಂದ ನಾಲ್ಕೈದೆಣಿಕೆಯಿಂದಂ॥

ಪ್ರಸಾರಂ

ಪೂರ್ವಾರ್ಧ }
೪ । ೫ । ೪ । ೫
೪ । ೫ । ೪ । ೫
೪ । ೫ । ೪ । ೫ । ೪ । ೫ ಗುರು

ಇದಂತೆಯೇ ಉತ್ತರಾರ್ಧವು

ಷಟ್ಪದಿಶ್ರೇಣಿಯ ಮಾತ್ರಾವಿವರಣಂ

| ಕ್ರಮಾಂಕ | ಷಟ್ಪದಿಗಳ ಹೆಸರು | ಮಾತ್ರೆಗಳು | |
|---|---|---|---|
| | | ಕಿರಿಯಡಿಗೆ | ಪಿರಿಯಡಿಗೆ |
| ೧ | ಶರ ಷಟ್ಪದಿ | ೮ | ೧೪ |
| ೨ | ಕುಸುಮ ಷಟ್ಪದಿ | ೧೦ | ೧೭ |
| ೩ | ಭೋಗ ಷಟ್ಪದಿ | ೧೨ | ೨೦ |
| ೪ | ಭಾಮಿನಿ ಷಟ್ಪದಿ | ೧೪ | ೨೩ |
| ೫ | ಪರಿವರ್ಧಿನಿ ಷಟ್ಪದಿ | ೧೬ | ೨೬ |
| ೬ | ಪ್ರೌಢ ಷಟ್ಪದಿ | ೧೮ | ೨೯ |
| ೭ | ವಾರ್ಧಿಕ ಷಟ್ಪದಿ | ೨೦ | ೩೨ |

ಬೆಳಗಾಂವಿ,
ತಾ॥ - ೫-೨೯ ೩.

ಬಲ್ಲವರ ಅಡಿಯಾಳು,
ಪಟ್ಟೇದ ಚನ್ನಪ್ಪನ ಮಗ ಬಸವಪ್ಪ.

ಅದು ಧೈರ್ಯಕ್ಕೆ ಕಾರಣವಾಗಿರಬೇಕು. ಪರಿವರ್ಧಿನಿ ಷಟ್ಪದಿಗೂ ವಾರ್ಧಿಕಕ್ಕೂ ಇರುವ ಅಂತರವನ್ನು ಇವರು ಭರ್ತಿಮಾಡಿದ್ದು ನನಗೆ ಬಹಳ ಸಮಂಜಸವಾಗಿದೆಯೆಂದು ತೋರುತ್ತದೆ. ಮತ್ತಿವರು ಕಟ್ಟಿದ ಸೇತುವಿಗೆ ಇವರು ಪ್ರೌಢ (ಹಿಂದಿನ ಪುಟದ ಟಿಪ್ಪಣಿ ನೋಡಿ) ಷಟ್ಪದಿಯೆಂಬ ಯೋಗ್ಯ ಹೆಸರನ್ನು ಕೊಟ್ಟಿರುತ್ತಾರೆ. ತಾವು ಹಳಬರೇ ಆಗಿರುವರಾದರೂ ಹಳೆಯ ಕಾಲುಹಾದಿಯನ್ನು ತುಳಿಯುವುದೇ ನೀತಿ ಎಂಬ ಮೂಢ ಶ್ರದ್ಧೆಗೆ ಬಲಿ ಬೀಳದೆ ರಾಜಬೀದಿಯ ಗಾಳಿ ಬಿಸಿಲುಗಳಿಗೆ ಇವರು ಮೈ ನೀಡಿದ್ದನ್ನು ನೋಡಿದರೆ, ಇವರ ಮುದಿ ಮೈಗಟ್ಟೂ ನೆರೆತ ಕೂದಲೂ ಇವರ ಹೃದಯ ಯೌವನವನ್ನು ಕುರಿತು ಸುಳ್ಳು ಸಾಕ್ಷಿಯನ್ನೀಯುತ್ತಿವೆಯೆಂದು ನನಗೆ ತೋರುತ್ತದೆ. ಬೆಳೆಯುವುದು ಮತ್ತು ಬೆಳೆಸುವುದು ಇವೇ ಸಾಹಿತ್ಯದ ಉದ್ದೇಶ ಎಂದರೆ ಹೊಸ ಹೊಸ ಕವಿಗಳು ತಮ್ಮ ಭಾವಗಳನ್ನು ಹೊಸ ಹೊಸ ಘಟಗಳಲ್ಲಿ ಸ್ಥಾಪಿಸಬೇಕು. ಘಟದಲ್ಲಿ ವ್ಯಕ್ತಿತ್ವವಿರಬೇಕು. ಅದರು ಸಮೃಷ್ಟಿಯನ್ನು ಪ್ರತಿಬಿಂಬಿಸಬೇಕು. ಈ ರೀತಿ ಸಮುದಾಯವನ್ನು ಎಚ್ಚರಿಸಬೇಕು. ವ್ಯಕ್ತಿತ್ವಕ್ಕೆ ತಕ್ಕ ಅಲಂಕಾರವಿರಬೇಕು. ಹೀಗಿಲ್ಲವಾದರೆ 'ಸಾಕಪ್ಪಾ', ಈ ಕವಿ ಮತ್ತೀ ಸಾಹಿತ್ಯ' ಎಂದು ನಿಟ್ಟುಸಿರು ಬಿಟ್ಟರೆ ಏನೂ ತಪ್ಪಾಗಲಾರದು !

ಕವಿಯ ಭಾವವು ತನ್ನದೇ ಆಗಿರಬೇಕು. ಬೇರೆಯವರ ಭಾವವನ್ನು ತಕ್ಕೊಂಡು ತನ್ನ ಪದಕವಚವನ್ನು ಹೊದಿಸುವುದು ಅನ್ಯಾಯ. ದೃಷ್ಟಾಂತಕ್ಕೆ ಇಂದಿಲ್ಲಿಯೇ ಹತ್ತು ಹನ್ನೆರಡು ವರ್ಷದ ಯುವಕನೊಬ್ಬನು ಒಂದು ಕಥೆಯನ್ನೋದಿದನು. ಅದರಲ್ಲಾತನು ಉಷೆಯನ್ನು 'ತರುಣಿಯರ ಅಧರ'ಕ್ಕೆ ಹೋಲಿಸಿದ್ದಾನೆ. ಈ ವಯಸ್ಸಿನಲ್ಲಿ ತನಗೆ ಅಧರವೆಂದರೇನು ಗೊತ್ತು ? ಇನ್ನೊಂದುಕಡೆ ''ಹೆಂಗೆಳೆಯರ ಬೆಳದಿಂಗಳಾಟ''ವನ್ನು ತೋರಿಸಿರುತ್ತಾನೆ! ವಿಚಿತ್ರವೇ ಅಲ್ಲವೆ ? ಈತನು ''ಹರೆಯದ ಹುಡುಗನು. ಎಲ್ಲರೂ ಹಾಗೆಯೇ ಮಾಡುತ್ತಾರೋ ?'' ಎಂದು ಕೇಳಬಹುದು. ಇಂತಹ ಅನೇಕ ದೃಷ್ಟಾಂತಗಳನ್ನು ನಾನು ಎತ್ತಿಕೊಡಬಲ್ಲೆ. ಕೋಕಿಲೆಯನ್ನು ಕುರಿತು ಹಲವರು ಹಾಡಿದರು. ಅದನ್ನು ನೋಡಿದವರೆಷ್ಟುಮಂದಿ ? ಅದರ 'ಪಂಚಮಸ್ವರ'ವನ್ನು ವರ್ಣಿಸಿದವರನೇಕರು ? ಅದು ಪಂಚಮವೆಂದು ಹೇಗೆ ಗೊತ್ತು ? ಹಾಗಾದರೆ ಅದರ ಷಡ್ಜ ಶೃತಿ ಎಲ್ಲಿದೆ ? ನಿಜವಾಗಿಯೂ ಕೋಕಿಲೆಯ ಸ್ವರವು ಇಂಪಾಗಿದೆಯೋ ? ಅದನ್ನು ೫ ನಿಮಿಷವಾದರೂ ಬಿಡದೆ ಕೇಳಿ ಸುಖಪಡಬಹುದೋ ? ಅಥವಾ ಕಾವ್ಯದ ಕೋಕಿಲೆಯು ಬೇರೆಯೇ ಆಗಿದೆಯೋ ? ಈ ಬಹು ಕವಿಪ್ರಿಯವಾದ ಕೋಕಿಲೆಯ ಸಾಮುತಿಯು ಅನುಭವದಿಂದ ಹೊರಡುತ್ತದೋ ? ಅಥವಾ ಹಳೆಯ ಪಾಠವನ್ನು ಒಪ್ಪಿಸುವುದೋ ಇದು ಕವಿತೆಯ ಮುಸುಕಿನಲ್ಲಿ ? ಕವಿಯು ತನ್ನ ಭಾವವನ್ನು ತನ್ನ ಅನುಭವವನ್ನು ಹೊರಸೂಸಬೇಕು. ಹೇಗೆ ಸೂರ್ಯನು ಉದಯಿಸುವಾಗ ಕ್ಷಣಕ್ಷಣಕ್ಕೂ ಇಂಪುಸೊಂಪಾಗಿ ಬದಲುಗೊಳ್ಳುವ ಬಣ್ಣಗಳು ದಿಗಂತದಲ್ಲೆಲ್ಲ ಆತನನ್ನು ಆವರಿಸಿ ಅಲಂಕರಿಸುತ್ತವೋ, ಹಾಗೆಯೇ ಭಾವಭಾಸ್ಕರನುದಯಿಸಿದಲ್ಲಿ ಚಿತ್ತಾಕಾಶದಿಗಂತವೂ ನವನವ ಶಬ್ದಾಲಂಕಾರಗಳಿಂದ ಆತನನ್ನು ಆಲಂಗಿಸಿಕೊಂಡಿರುತ್ತದೆ. ಭಾವವಿದ್ದಲ್ಲಿ ಭಾಷೆಯು ಅದರ ಸಹಜ ಪ್ರಭೆಯು. ಅದರಿಂದಾಗುವ ಉಲ್ಲಾಸ ಉತ್ಕ್ರಾಂತಿಗಳು ಅದರ ಸಹಜಪ್ರಭಾವವು. ಸೂರ್ಯನು ಜೀವರಾಶಿಗಳನ್ನು ಉದಯರಾಗದಿಂದೆಬ್ಬಿಸುವುದಿಲ್ಲ, ಅವನುದಯದಲ್ಲಿಯೇ ಅವುಗಳ ಎಚ್ಚರಿಕೆಯೂ ಇದೆ. ಹಾಗೆಯೇ ಸಾಹಿತ್ಯ ಹಾಗೆಯೇ ಕಾವ್ಯವೂ.

ಭಾವವು ಒಂದು ಕಡೆಯದು, ಶಬ್ದಗಳು ಇಕ್ಕಳದಿಂದೆತ್ತಿದವು, ಅಲಂಕಾರಗಳು ಆರಿಸಿಟ್ಟವು – ಹೀಗಾದ ಪಕ್ಷಕ್ಕೆ ಸಾಹಿತ್ಯವು ಜ್ಞಾನದ ಬೆಳಕಲ್ಲ, ಮುಸುಕು. ಅದರ ಶಬ್ದಗಳು ಭಾವದ ದೇಹವಲ್ಲ ಅದರ ಗೋರಿ. ಭಾವ ಪದ ಅಲಂಕಾರ ಇತ್ಯಾದಿಗಳನ್ನು ಚರ್ಚಿಸೋಣಾಯಿತು. ಈಗ ನಮ್ಮ ಕವಿಗಳು ತಕ್ಕೊಳ್ಳುವ ವಿಷಯಗಳನ್ನು ವಿಮರ್ಶಿಸೋಣ. ನಿಂದಾಸ್ತುತಿಯ ವಿಷಯವನ್ನು ಹೇಳಿಯಾಯಿತಷ್ಟೆ. ಇವನ್ನು ಬಿಟ್ಟರೆ ಮತ್ತೆ ಬರುವವು ಅಂದರೆ ದೈನ್ಯ, ನಿರಾಶೆ, ಅಭಿಲಾಷೆಯನ್ನು ಪ್ರಧಾನವಾಗಿಟ್ಟುಕೊಂಡ ವಿಷಯಗಳು. ಸಾಕಷ್ಟು ವಿನೋದವೇತಕ್ಕಿಲ್ಲ ನಮ್ಮ ಬರೆಹಗಾರರಲ್ಲಿ ? ಮಕ್ಕಳ ಗೀತೆಗಳೇತಕ್ಕೆ ಅಷ್ಟು ಅಪರೂಪವಾಗಿರಬೇಕು? ಸಂಘದ ದೋಷಗಳನ್ನು ಬೈಲಿಗೆಳೆಯುವ ಪದ್ಯಗದ್ಯಗಳೇತಕ್ಕಿಲ್ಲ? ನಮ್ಮ ಕವಿಗಳಿಗೆ ಈ ರಾಜ್ಯದಲ್ಲಿ 'ವಸ್ತು'ವು ಸಿಗುವುದಿಲ್ಲವೇ ? ಎಲ್ಲಿ ನೋಡಿದರೂ ಭಕ್ತಿ, ಸರಸಲ್ಲಾಪ, ಗಿಡ, ಮರ ಹೊಳೆಗಳ ವರ್ಣನೆ ಮುಂತಾದವುಗಳೇ ಹೆಚ್ಚು! ವಿನೋದವೂ ಗಂಭೀರ ಬುದ್ಧಿಗೆ ಯೋಗ್ಯವಲ್ಲವೇನೋ ! – ಮಕ್ಕಳ ಗೀತೆಯೆಂದರೆ – ಕವಿಗಳಿಗೂ ಮಕ್ಕಳ ತೊದಲು

ನುಡಿಯೆಂದರೆ ಅಸಹ್ಯವೇನೋ ! ಸಂಘದ ಅತಿ ನೀಚ ಕ್ರೂರ ನಡತೆಗಳನ್ನು ಮುಂದಿಡುವುದೆಂದರೆ ಕವಿತೆಯ ಸೊಂಪಿಗೂ ಈ ಕರ್ಕಷ ವಿಷಯಕ್ಕೂ ಹೊಂದಿಕೆಯಿಲ್ಲ ! - ಎಂದುಕೊಂಡು ನಮ್ಮ ಆಧುನಿಕ ಕವಿಗಳು ದೇವರನ್ನೂ ಪ್ರೇಮವನ್ನೂ ನಿಸರ್ಗವನ್ನೂ ವರ್ಣಿಸುವ ಘನಕಾರ್ಯದಲ್ಲಿಯೇ ಇಳಿದುಬಿಟ್ಟಿದ್ದಾರೆ ! ಮತ್ತೆ ವಿಚಾರವಿಲ್ಲದ ಹಳೆತಲೆಗಳಲ್ಲಿ ಇವುಗಳಿಗೆ ಜಾಗೆ ಹೆಚ್ಚು, ಮಾನ ಹೆಚ್ಚು . ಎಂದಮೇಲೆ ಕವಿಗಳು ಕ್ರಾಂತಿಯ ಹಾದಿಯನ್ನು ತುಳಿಯುವುದಕ್ಕೆ ಪ್ರೋತ್ಸಾಹವಾದರೂ ಎಲ್ಲಿದೆ ? ವಿಧವೆಯರ ದುಃಸ್ಥಿತಿಯಲ್ಲಿ ಕಾವ್ಯಕ್ಕೆ ಉತ್ತೇಜನವಿಲ್ಲವೋ ? ಹೆಂಗಸರ ನಿರಕ್ಷರ ನಿರಾಧಾರಸ್ಥಿತಿಯಲ್ಲಿ ಉತ್ತೇಜನವಿಲ್ಲವೋ ? ಸಾಕ್ಷರ ಸಂಘದ ಅತ್ಯಾಚಾರಗಳಲ್ಲಿ ಕವಿಗೆ ವಿಷಯವು ದೊರಕುವುದಿಲ್ಲವೋ ? ಹಗಲಿರುಳು ದುಡಿದೂ ಧನತ್ವದ ಸೂರೆಯಿಂದ ಹೊಟ್ಟೆಬಟ್ಟೆಗಳಿಗಿಲ್ಲದೆ ಸಾಯುತ್ತ ಬದುಕುವ ರೈತರ ಗೋಳಿನಲ್ಲಿ ಕಾವ್ಯದ ಉಸಿರಿಲ್ಲವೋ ? ಸಂಘದ ಮಹಾಜನರಿಗೆ ಅನ್ನ ವಸ್ತ್ರಗಳನ್ನುಂಟುಮಾಡುವವರಾಗಿದ್ದೂ ನಾಯಿ ಬೆಕ್ಕುಗಳಿಗಿಂತಲೂ ಕಡೆಯೆಂದು ದೂರವಿಡಲ್ಪಡುವ ಪಂಚಮರ ದುಃಸ್ಥಿತಿಯಲ್ಲಿಯೂ ನಮ್ಮ ಕವಿಗಳಿಗೆ ಉತ್ತೇಜನವು ಲಭಿಸುವುದಿಲ್ಲವೋ ? ಕೃತಕವಿವಾಹ ಬಾಹ್ಯವಾಗಿರುವಾಗ ಹುಟ್ಟಿದ ಅರಿವಿಲ್ಲದ ಹಸುಗೂಸುಗಳಿಗೂ ಅವುಗಳ ತಾಯಂದಿರಿಗೂ ವಿವೇಕಬಾಹ್ಯರಾದ ಭದ್ರಲೋಕವು ಕೊಡುವ ಹಿಂಸೆಯಲ್ಲಿ ಕವಿಯ ಕವಿತಾಧೋರಣೆಯನ್ನೆಬ್ಬಿಸುವ ಬೆಂಕಿಯಿಲ್ಲವೋ ? ಸಾರಾಂಶ - ಹತ್ತಿರದ ಸುತ್ತು ಮುತ್ತಲಿನ ರಂಗದಲ್ಲಿ ನಮ್ಮ ಮಹಾಕವಿಗಳಿಗೆ ಪ್ರೇರಣೆಯನ್ನುಂಟು ಮಾಡುವ ಶಕ್ತಿಯಿಲ್ಲ! ಈ ಕವಿಗಳಿಗೂ ಅಪರೂಪ ಪ್ರಾಣಿವರ್ಗದವರೇ ಅಲ್ಲವೆ ? ತಮ್ಮಲ್ಲಿ ಖಂಡಿಗಟ್ಟಲೆಯಿಂದ ಹೊರಡುವ ಸಾಹಿತ್ಯದಲ್ಲಿ ಇಂಥ ಆವಶ್ಯಕ ವಿಷಯಗಳನ್ನು ನೀವೆಷ್ಟು ಕಡೆ ನೋಡಿದ್ದೀರಿ ? ಮತ್ತೂ ಬಂದು ಹೋಗಿ ದೇವ, ಧರ್ಮ, ಗಾಂಧಿ, ಮನೋವಲ್ಲಭೆ, ಹಕ್ಕಿ , ಚುಕ್ಕಿ , ....... ಇವೇ ಹೊರತು, ದರಿದ್ರ , ವಿಧವೆ, ವಿಧುರ, ಅಸ್ಪೃಶ್ಯ, ನಿಮ್ನ , ಗತಿವಿಹೀನ ಇಂಥವರನ್ನು ನೋಡಿದರೆ ನಮ್ಮ ಕವಿಗಳಿಗೂ ಸಾಹಿತ್ಯಗಾರರಿಗೂ ಹುರುಪೇ ಹುಟ್ಟುವುದಿಲ್ಲ ! ಇಂಥವರಿಂದ ಹೊರಬೀಳುವುದೂ ಸಾಹಿತ್ಯವೋ ಅಲ್ಲವೋ ಎಂಬುದನ್ನು ನೀನೇ ವಿಚಾರಿಸಬೇಕು.

ಮತ್ತೆ ಹೇಳುವುದೇನೆಂದರೆ ಸಾಹತ್ಯದಲ್ಲಿ ಹೊಸ ರೀತಿ ನೀತಿ ಆದರ್ಶಗಳಿರಬೇಕು. ಹೊಸ ಹುರುಪಿರಬೇಕು. ನಿರ್ಭಯತೆ ನಿರ್ದಾಕ್ಷಿಣ್ಯತೆಯಿರಬೇಕು. ಮೊದಲು ಜನಸಾಮಾನ್ಯಕ್ಕಾಗಿ ವಿಮರ್ಶಾತ್ಮಕ ಗದ್ಯವು ಧಾರಾಳವಾಗಿ ಹುಟ್ಟಬೇಕು. ಮತ್ತು ಅದರ ಕೆನೆಯಾದ ಪದ್ಯ. ಬುದ್ಧಿಯನ್ನು ಅರಳಿಸದ್ದು ಎಂದೂ ಸಾಹಿತ್ಯವಾಗಲಾರದು. ಈ ವಿಷಯಗಳನ್ನು ಅನೇಕ ದೃಷ್ಟಾಂತಗಳೊಡನೆ ನಿಮ್ಮ ಮುಂದೆ ಇಟ್ಟಿದ್ದೇನೆ. ವಿಮರ್ಶಿಸುವುದು ನಿಮ್ಮ ಕೆಲಸ. ಆರಿಸುವುದೂ ನಿಮ್ಮ ಕೆಲಸ. ಗ್ರಾಹ್ಯವಾದ ಅಂಶವೇನಾದರೂ ಇದ್ದಲ್ಲಿ ಅದನ್ನು ಆಚರಿಸುವ ಧೈರ್ಯವೂ ನಿಮ್ಮದೇ. ನಾನು ಸಾಹಿತ್ಯಪಟುವಲ್ಲ, ಆದರೆ ಸಯುಕ್ತಿಕ ಮತಾಧಿಕಾರವನ್ನು ನನಗೆ ನೀವುಗಳು ಕೊಟ್ಟಿದ್ದೀರಿ. ಅದಾಕ್ಕಾಗಿ ನನ್ನ ಮತವನ್ನು ಮಂಡಿಸಿದ್ದೇನೆ. ಯುಕ್ತಾಯುಕ್ತದ ಪರೀಕ್ಷೆಯ ಹಕ್ಕು ನಿಮ್ಮದು. ಓಂ ತತ್ ಸತ್ !

❑

**೧೯೨೪ರಲ್ಲಿ ಪ್ರಾರಂಭವಾದ 'ಪ್ರೇಮ ಎಂಬ ತ್ರೈಮಾಸಿಕವು' ಅಲ್ಲಿ ಅದರ ಸಂಪಾದಕರಾದ ಪಂಡಿತ ತಾರಾನಾಥ (೧೮೯೧ - ೧೯೪೨) ಅವರು ಬೆಳಗಾಂವಿ ಸಾಹಿತ್ಯಪರಿಷತ್ತಿನ ಅಧ್ಯಕ್ಷರಾಗಿ ಮಾಡಿದ ಭಾಷಣದ ಸಾರಾಂಶವು, ೧೯೩೦ ಜನವರಿ 'ಪ್ರೇಮ' ಮಾಸಪತ್ರಿಕೆಯಲ್ಲಿ ಪ್ರಕಟವಾಗಿದೆ.**

ಪ್ರಿಯ ಸಂಪಾದಕರೇ, ಆಕಸ್ಮಿಕವಾಗಿ ಪರಿಚಿತ ದೊಡ್ಡ ಮನುಷ್ಯರ ಮನೆಯಲ್ಲಿ ನಿಮ್ಮ ಪುಸ್ತಿಕೆಯನ್ನು ನೋಡಿದೆ. ಇತರ ಪುಸ್ತಿಕೆಗಳೂ ಇವೆಯೇ ಎಂದು ಕೇಳಿದೆ. ಅದಕ್ಕಾಗಿ ಅವರು ನಾನು ಚಂದಾದಾರನಲ್ಲ ಎಂದರು. ಆ ಕೂಡಲೇ ನಮ್ಮಲ್ಲಿಯ ಗ್ರಂಥಾಲಯದಲ್ಲಿ, ಆಮೇಲೆ ನಮ್ಮಲ್ಲಿನ ಕಾಲೇಜಿನ ಪ್ರಾಧ್ಯಾಪಕರುಗಳನ್ನೂ ಕಂಡು ವಿಚಾರಿಸಿದೆ. ಹೆಸರು ಕೇಳಿದ್ದೇವೆ, ಆದರೆ ನಾವು ತರಿಸುವುದಿಲ್ಲ ಎಂದರು. ನಮ್ಮ ಕನ್ನಡಿಗರಿಗೆ ಎಲ್ಲವೂ ಉಚಿತವಾಗಿ, ಬಲವಂತವಾಗಿ ಕೊಡಬೇಕೇನೋ ! ದಯವಿಟ್ಟು ಚಂದಾ ಸ್ವೀಕರಿಸಿ, ಇನ್ನು ಮೇಲೆ ನನಗೆ ಕಳುಹಿಸಿಕೊಡಿ.

ಕೋಲಾರ **ಎಂ. ಸುಧಾಮಣಿ**

# ಕಿರುಗವನಗಳು - ಒಂದು ಟಿಪ್ಪಣಿ

ಈರಪ್ಪ ಎಂ. ಕಂಬಳಿ

ಪ್ರಪಂಚದ ಯಾವುದೇ ಜನಾಂಗದ ಸಾಹಿತ್ಯವನ್ನು ತೆಗೆದುಕೊಂಡರೂ ಅಲ್ಲಿ ಕಾವ್ಯವೇ ಹೆಚ್ಚುಗಾರಿಕೆ ಪಡೆದಿರುವುದೊಂದು ವಿಶೇಷ. ಬಹುಶಃ ಕಾವ್ಯಸೃಷ್ಟಿಯಲ್ಲಿ ಹೀಗೆ ಕವಿಯು ತನ್ನ ಸ್ವವ್ಯಕ್ತಿತ್ವದೊಂದಿಗೆ ಅನುಸಂಧಾನ ನಡೆಸುತ್ತಾನೋ, ಹಾಗೇ ಓದುಗನೂ ಕಾವ್ಯಾಸ್ವಾದನೆಯ ಮೂಲಕ ಆ ಕವಿಯ ಅಂತರಂಗ ಸ್ಪರ್ಶಿಸುವ ಸಂವೇದನೆಗೆ ಒಳಗಾಗುತ್ತಾನೆ. ಆ ಕಾರಣಕ್ಕಾಗಿ, ಕಾವ್ಯವೆಂದರೇನೇ ಸೃಜನಶೀಲತೆಯಲ್ಲಿ ಕುಸುರೀ ಕೆಲಸವಿದ್ದಂತೆ. ಹೀಗಾಗಿ, ಬೇರೆಲ್ಲ ಪ್ರಕಾರಗಳಿಗಿಂತ ಕಾವ್ಯಕ್ಕೆ ವಿಶೇಷ ಸ್ಥಾನ-ಮಾನ ದಕ್ಕಿರುವದು; ಪಂಡಿತರಿಂದ ಪಾಮರರವರೆಗೆ ಎಲ್ಲರೂ ಕಾವ್ಯಕ್ಕೆ ಒಲಿದಿರುವುದು. ಈ ಹಿನ್ನೆಲೆಯಲ್ಲಿ, ಒಟ್ಟಾರೆ ಕಾವ್ಯಕ್ಕಿರುವ ಸಂವಹನ ಶಕ್ತಿ ಅತಿ ದೊಡ್ಡದು ಎಂದು ಒಪ್ಪಿಕೊಳ್ಳಬಹುದಲ್ಲವೆ ?

ಕನ್ನಡ ಕಾವ್ಯದ ಮಟ್ಟಿಗೆ ಆಲೋಚನೆ ಮಾಡಿದಾಗಲೂ, ನವೋದಯ ಕಾಲದ ಕನಸುಗಾರಿಕೆ - ಆದರ್ಶಪ್ರಿಯತೆಗಳ ಸ್ಥಾಯೀಭಾವದಲ್ಲಿ ಹೊರಹೊಮ್ಮಿದ ಗೇಯಗುಣದ ಭಾವಗೀತೆಗಳು; ವಿಷಾದಪರ್ವವನ್ನು ಸಾಂಕೇತಿಸುತ್ತಲೇ ವ್ಯಕ್ತಿನಿಷ್ಠತೆಯ ಮೂಲಕ ಬದುಕಿನ ಸಂಕೀರ್ಣತೆ ಮೆರೆದ ನವ್ಯಕಾವ್ಯ; ತದನಂತರ ಬಂದ ಬಂಡಾಯ - ದಲಿತ ಕಾವ್ಯ ಸಮಾನತೆಗಾಗಿ ತುಡಿದ ಆಕ್ರೋಶದ ಧ್ವನಿಯಾಗಿರುವುದು - ವಿವಿಧ ಘಟ್ಟಗಳಾಗಿವೆ.

ಇತ್ತೀಚಿನ ವರ್ಷಗಳಲ್ಲಿ 'ವಿ ಹ್ಯಾವ್ ನೋ ಟೈಮ್' - ಎನ್ನುವ ಪ್ರವೃತ್ತಿ ವಿಪರೀತವಾಗಿದೆ. ಜಗತ್ತು ವಿಸ್ತಾರವಾದಂತೆಯೇ ಆಧುನಿಕ ತಂತ್ರಜ್ಞಾನಗಳ ನೆರವಿನಿಂದ ಅದನ್ನು ಮುಷ್ಠಿಯಲ್ಲಿ ಹಿಡಿದಿಟ್ಟುಕೊಳ್ಳುವ ಯತ್ನದಲ್ಲಿ - ನಾಗರಿಕತೆಗೆ ಎಲ್ಲಿಲ್ಲದ ವೇಗ ಬಂದಿದೆ. ಅದರ ಪರಿಣಾಮವಾಗಿ, ಮನುಷ್ಯ ಹಿಂದಿನಂತೆ ವಿರಾಮವಾಗಿ ಕೂತು ಓದುವ ಕಾಲ ಮತ್ತು ಸಹನೆಯನ್ನು ಈಗ ಕಳೆದುಕೊಳ್ಳುತ್ತಿದ್ದಾನೇನೋ ಅನ್ನಿಸುತ್ತದೆ. ವಿಪರೀತ ಒತ್ತಡದ ಧಾವಂತದ ಈ ಕಾಲ ಘಟ್ಟದಲ್ಲಿ, ಅಕ್ಷರ ಮಾಧ್ಯಮಕ್ಕೆ ತುಸು ಹಿನ್ನೆಡೆ ಒದಗಿದಂತೆ ತೋರುತ್ತಲಿದೆ. ದೀರ್ಘ ಕವನಗಳನ್ನು ಓದಿ ಆಸ್ವಾದಿಸುವ ತಾಳ್ಮೆ ಕಳಕೊಂಡವನಾಗಿ ಪತ್ರಿಕೆಗಳಲ್ಲಿ ಬರುವ ಕಿರುಗವನಗಳ ಮೇಲೆ ಕಣ್ಣಾಸಿಕೊಂಡು ಹಾಳೆ ಮಗುಚುವ ಹಂತ ತಲುಪಿರುವುದು ಈಗಿನ ಅಕ್ಷರವಂತ ನಾಗರಿಕನ ಲಕ್ಷಣವಾಗಿದೆ. ಆ ನಾಕಾರು ಸಾಲಿನ ಪದ್ಯಗಳಲ್ಲಿಯೇ ಮಿಂಚಿನ ಸಂಚಾರವಾಗಬೇಕು; ಥಟ್ಟನೇ ಅರ್ಥ ಸ್ಫೋಟಿಸುವ ಗುಣ ಹೊಂದಿರಬೇಕು. ಬಹುಶಃ ಈ ನಿರೀಕ್ಷೆಯಲ್ಲಿಯೇ ಇಂದು 'ಕಿರುಗವನಗಳು' ಹುಟ್ಟಿಕೊಳ್ಳುವುದಕ್ಕೆ ದಾರಿಯಾಗಿರಬೇಕು.

ಪಾಶ್ಚಾತ್ಯರಲ್ಲೂ Epigram ಎಂದು ಕರೆಯಲಾಗುವ ಕಿರುಗವನಗಳ ರಚನೆ ನಡೆಯಿತು. ಮಾರ್ಶಲ್, ಬ್ಯಾಲೋ, ಪಿರೋನ್. ಲೋಗೋ, ಸ್ವಿಲ್ಲರ್ ಬ್ಲೇಕ್, ಗೊಯಿಟ್ ಮೊದಲಾದ ಕವಿಗಳನ್ನು ಹೆಸರಿಸಬಹುದು. ಸಂಸ್ಕೃತ ಸಾಹಿತ್ಯದಲ್ಲೂ ಮುಕ್ತಕ, ಸುಭಾಷಿತ, ಚಾಟುಪದ್ಯ, ಚರಣ ಮೊದಲಾದವು ಬಳಕೆಯಲ್ಲಿದ್ದವು. ಹಿಂದಿಯಲ್ಲಿ ದೋಹೆ, ಗಜಲ್, ಶಾಯಿರಿಗಳೂ ಕಿರುಗವನಗಳ ರೂಪದಲ್ಲಿ ಚಾಲ್ತಿಯಲ್ಲಿವೆ. ಕಿರಿದರಲ್ಲಿ ಹಿರಿದಾದ ಅರ್ಥ ಹೊಳೆಯುವಂತೆ ಮಾಡಬಲ್ಲ ಇವುಗಳಿಗೆ ಸಂವಾದಿಯಾಗಿ ಕನ್ನಡದಲ್ಲೂ ದ್ವಿಪದಿ, ತ್ರಿಪದಿ, ಚೌಪದಿ, ಚುಟುಕ, ಹಾಯಿಕು, ಮಿನಿಗವನ, ಹನಿಗವನ ಮೊದಲಾದ ಹೆಸರುಗಳಿಂದ ಕಿರುಗವನಗಳನ್ನು ಗುರುತಿಸುವ ಪರಿಪಾಠವಿದೆ.

ಒಂದು ಕಾಲದಲ್ಲಿ 'ಚುಟುಕ' ಕನ್ನಡ ಕಾವ್ಯ ನೆಲದಲ್ಲಿ ಹುಲುಸಾಗಿ ಬೆಳೆದು ಬಂದ ಫಸಲಾಗಿತ್ತು. ಆ ಪ್ರಕಾರಕ್ಕೆ ಜನಪ್ರಿಯತೆ ತಂದು ಕೊಟ್ಟವರಲ್ಲಿ ಡಿ.ವಿ. ಗುಂಡಪ್ಪ, ಎಸ್.ವಿ. ಪರಮೇಶ್ವರ ಭಟ್ಟ, ಜಿ.ಪಿ. ರಾಜರತ್ನಂ, ವಿ.ಜಿ. ಭಟ್ಟ, ಅಕಬರ ಅಲಿ, ದಿನಕರ ದೇಸಾಯಿ, ಜಿ.ಎಸ್. ಅವಧಾನಿ, ವಿಡಂಬಾರಿ, ಶಾಮ ಹುದ್ದಾರ, ಶಂ.ಗು. ಬಿರಾದಾರ, ಪಂಚಾಕ್ಷರಿ ಹಿರೇಮಠ, ಎಚ್.ಎಸ್. ಬಿಳಿಗಿರಿ ಮೊದಲಾದವರು ಅಗ್ರಗಣ್ಯರು.

ಧ್ವನಿಪೂರ್ಣವಾಗಿರುತ್ತಿದ್ದ ಸಂಸ್ಕೃತದ ಚಾಟು ಪದ್ಯದ ಮಾದರಿಯಲ್ಲಿಯೇ ಕನ್ನಡದಲ್ಲಿ ಚುಟುಕ ಬಂದಿತು. ಜೊತೆಗೆ ಇಂಗ್ಲೀಷಿನ Limeric ಛಂದಸ್ಸನ್ನು ಅನುಸರಿಸಿದಂತೆ ಕನ್ನಡದಲ್ಲಿ ಈ ಬಗೆಯ ಪ್ರಾಸಬದ್ಧವಾದ ಚುಟುಕ ರಚನೆ ಒಂದು ಕಾಲದಲ್ಲಿ ಭಾರೀ ಗಮನ ಸೆಳೆದಿತ್ತು. ನಾಕೇ ನಾಲಿನ, ಪ್ರಾಸಬದ್ಧ ಸರಾಗವಾದ ಓದಿನಲ್ಲಿ ಕಚಗುಳಿಯಿಟ್ಟಂತೆ, ಮಿಂಚಿನ ಸಂಚಲನೆಯುಂಟು ಮಾಡಿ, ಅರ್ಥ ಸ್ಫುರಿಸುವ ಗುಣ ಅದರದ್ದು. ಮನುಷ್ಯ ಸ್ವಭಾವಗಳ ಜೊತೆಗೆ ವಿಶೇಷವಾಗಿ ಸಾಮಾಜಿಕ – ರಾಜಕೀಯ ವಿಡಂಬನೆ ಚುಟುಕಗಳಲ್ಲಿ ಪ್ರಧಾನವಾಗಿರುತ್ತಿದ್ದವು. ಚುಟುಕ ಬರೆದವರಲ್ಲಿ ದಿನಕರ ದೇಸಾಯಿಯವರದು ದೊಡ್ಡ ಹೆಗ್ಗಳಿಕೆ. ಮಾದರಿಯಾಗಿ ಅವರದೊಂದು ಚುಟುಕ ಗಮನಿಸಿ :

ಕಳ್ಳರಿಗೆ ಸುಳ್ಳರಿಗೆ ಈ ಪ್ರಜಾರಾಜ್ಯ
ಬಹಳ ಅನುಕೂಲವೆಂದನು ನಮ್ಮ ಅಜ್ಜ
ಸಜ್ಜನರು ಕುಳಿತುಕೊಂಡರು ಮೂಲೆಯಲ್ಲಿ
ಸಂಧಿಸಾಧಕರೆಲ್ಲ ಸೇರಿದರು ದಿಲ್ಲಿ

ಒಂದು ಕಾಲದಲ್ಲಿ ಅಂತ್ಯ ಪ್ರಾಸದ ಚೌಪದಿಯನ್ನೇ 'ಚುಟುಕ' ಎಂದು ಗುರುತಿಸಲಾಗುತ್ತಿತ್ತು. ಕಾಲಕ್ರಮೇಣ ಕಿರುಗವನಗಳನ್ನೆಲ್ಲ ಸೇರಿಸಿ ಸಾರಾಸಗಟಾಗಿ ಚುಟುಕ (ಚೂರು ?) ಎಂದು ತಪ್ಪಾಗಿ ಗ್ರಹಿಸುವ ಮೂಲಕ ಅದೇ ಪರಿಪಾಠವಾಗಿ ಹೋಯಿತು. ಮೈಸೂರಿನಲ್ಲಿ ಸ್ವಘೋಷಿತ 'ಚುಟುಕ ಸಾಹಿತ್ಯ ಪರಿಷತ್ತು' ಕೂಡ ಹುಟ್ಟಿಕೊಂಡಿದೆ. ದೀರ್ಘ ಕವನ ಬರೆಯಬಲ್ಲ ಸಾಮರ್ಥ್ಯವಿರುವವರು ಕಿರುಗವನ ಬರೆದೂ ಸೈ ಅನ್ನಿಸಿಕೊಂಡರು. ಆದರೆ, ನೇರವಾಗಿ ಹನಿಗವನಕ್ಕೆ ಕೈಯಿಕ್ಕಿದ ಬಹುತೇಕರು ಆರಕ್ಕೇರದೆ ಮೂರಕ್ಕಿಳಿಯದೆ ಅಲ್ಲೇ ತೆವಳುತ್ತ ಉಳಿದರು. ಕಿರುಗವನಗಳ ವಿರಾಟ್ ರೂಪವನ್ನು ಗಮನಿಸುವುದಾದರೆ, ಒಂದು ದೃಷ್ಟಿಯಲ್ಲಿ ಪ್ರವಾಹ ಇಳಿದು ಹೋದ ನದೀ ಪಾತ್ರದಲ್ಲಿ ಬೇಸಿಗೆಯಲ್ಲಿ ಮಿಂಚುವ ಸಣ್ಣಪುಣ್ಣ ನೀರಿನ ಕುಂಟೆ–ಗುಂಡಿಗಳಾಗಿ ತೋರುವುದುಂಟು.

ಮುಕ್ತ ಛಂದಸ್ಸಿನ ಕಿರುಗವನಗಳ ಮಟ್ಟಿಗಷ್ಟೇ ಚಿಂತನೆ ಮಾಡಿದಾಗಲೂ – ನವೋದಯ, ಪ್ರಗತಿಶೀಲ, ನವ್ಯ, ಬಂಡಾಯ ಮತ್ತು ದಲಿತ ಘಟ್ಟಗಳನ್ನು ಹಾದು ಬಂದ ಕನ್ನಡ ಕಾವ್ಯ ಸಂದರ್ಭದಲ್ಲಿ, ನವೋದಯ ಕಾಲದ ಭಾವಗೀತೆಗಳೊಟ್ಟಿಗೇ ಕಿರುಗವನಗಳೂ ಅಲ್ಲಷ್ಟು ಇಲ್ಲಷ್ಟು ಚೆನ್ನಾಗಿದ್ದನ್ನು ಗುರುತಿಸಬಹುದು. ಮುಂದೆ, ನವ್ಯ ಕಾವ್ಯದ ಸಂಕಲನಗಳಲ್ಲಿ ಕೊನೆಯ ಪುಟಗಳಲ್ಲಿ ಕಿರುಗವನಗಳನ್ನು ಕೊಡುವ ಪರಿಪಾಠ ಶುರುವಾಯಿತು. ಅದಕ್ಕೆ ಮಾದರಿಯಾಗಿ, ಚೆನ್ನವೀರ ಕಣವಿಯರ 'ಎರಡು ದಡ' ಸಂಗ್ರಹದಲ್ಲಿ ಹಾಗೆ ಸಂಕಲನಗೊಂಡ ಕಿರುಗವನಗಳಲ್ಲಿ ಒಂದನ್ನು ಇಲ್ಲಿ ಉಲ್ಲೇಖಿಸಬಹುದು :

ನಾಡಿನ ತುಂಬ ನೂರು ಜಗದ್ಗುರು
ಇರುವುದು ಜಗವೊಂದೇ
ಕಾಡಿನ ತುಂಬಾ ಬಣ್ಣದ ಹೂಗಳು
ವಾಸನೆ ಕೆಲವೊಂದೇ

ನವೋದಯ ಕಾಲದ ಆಶಯವನ್ನಿಟ್ಟುಕೊಂಡಂತೆ, ನಾಡಿಗೂ ಕಾಡಿಗೂ ತಳಕು ಹಾಕಿದಂತೆ ಕವಿ ಇಲ್ಲಿ ಸೂಕ್ತ ಸಾಮಾಜಿಕ ವಿಡಂಬನೆ ಮಾಡುವ ಪರಿ ಗಮನ ಸೆಳೆಯುತ್ತದೆ. ನವೋದಯ, ನವ್ಯ ಕಾಲದ ಕವಿಗಳಿಗೆ ಛಂದಸ್ಸಿನ ಹಿಡಿತವಿದ್ದುದರಿಂದಲೋ ಏನೋ ಇಡೀಗವನ (ದೀರ್ಘಕವನ) ಬರೆಯುವ ಸಾಮರ್ಥ್ಯವಿರುವಂತೆಯೇ ಕಿರುಗವನ ಬರೆದೂ ಯಶಸ್ಸು ಸಾಧಿಸಿದರು. ಆ ಪರಂಪರೆ ಮುಂದುವರೆದಂತೆಯೇ, ಈಗ ಪ್ರತ್ಯೇಕವಾಗಿ ಕಿರುಗವನಗಳ ಸಂಕಲನ ಪ್ರಕಟಿಸುವ ಹಂತ ಮುಟ್ಟಿರುವುದನ್ನು ಕಾಣುತ್ತೇವೆ.

ಗಾತ್ರ ಮತ್ತು ಅರ್ಥ ಸ್ಫೋಟಿಸುವ ಕಿರುಗವನಕ್ಕೆ ಪರಿಭಾಷೆ ಬರೆದಂತೆ ರಸಿಕ ಕವಿಯೊಬ್ಬ 'ಮುಚ್ಚುವಷ್ಟು ಉದ್ದ ಇರಬೇಕು, ಕುತೂಹಲ ಕೆರಳಿಸುವಷ್ಟು ಗಿಡ್ಡ ಇರಬೇಕು'. (ಮಿನಿಸ್ಕರ್ಟನಂತೆ) ಎಂದು ಹೇಳುತ್ತಾನೆ. ಅಂಥ ಮುಕ್ತ ಛಂದಸ್ಸಿನ ಕಿರುಗವನಗಳಿಗೇ ಒತ್ತುಕೊಟ್ಟಂತೆ, ಸಂಕಲನ ತರುವಷ್ಟು ಬರೆದು ಈ ಪ್ರಾಕಾರವನ್ನು ಚಾಲ್ತಿಗೆ ತಂದವರಲ್ಲಿ ಸಿ.ಪಿ.ಕೆ., ಬಿ.ಆರ್. ಲಕ್ಷ್ಮಣರಾವ್, ಮೊದಲಾದವರು ಪ್ರಮುಖರು. ಮನುಷ್ಯ ಸ್ವಭಾವದ ಪ್ರೇಮ - ಕಾಮ, ಪರಿಸರಪ್ರೇಮ, ಸಾಮಾಜಿಕ-ರಾಜಕೀಯ ವಿಡಂಬನೆ ಇವೇ ಮೊದಲಾದ ವಸ್ತುಗಳನ್ನು ಕಿರಿದರಲ್ಲಿಯೇ ಇಡಿಕಿರಿದು ಸ್ಫೋಟಿಸುವ ಗುಣ ಕಿರುಗವನಗಳದ್ದಾಗಿದೆ.

**ಗಾಂಧಿ**

ಹುಟ್ಟುಗುರುಡರ ಓಣಿಯಲ್ಲಿ
ಚಾಳೀಸು ಮಾರಲು ಬಂದಾತ — **ಜಂಬಣ್ಣ ಅಮರಚಿಂತ**

ಸ್ನಾಯುಗಳು ಹಗ್ಗಗಳು ರಾಟೆಗಳು ಎಳೆದರೂ
ಏಳದೀ ಇಪ್ಪತ್ತ ಒಂದನೆಯ ಬೆರಳು
ಆದರೆಲ್ಲೋ ಎಂದೋ ಕಂಡ ಹುಡುಗಿಯ ನೆನಪೆ
ಸುಳಿದರಾಗುವುದರಲೆ ಕಬ್ಬಿಣದ ಸರಳು — **ಎಚ್.ಎಸ್. ಬಿಳಿಗಿರ**

**ಗ್ಯಾಟ್**

ತೆಗೀರಿ ಇದು
ಯಾವ ಸೀಮೆಯ ಒಪ್ಪಂದ
ನಮ್ಮ ಬೀಜಗಳೇನು
ಅವರ ಅಪ್ಪಂದ ? — **ಬಿ.ಆರ್. ಲಕ್ಷ್ಮಣರಾವ್**

**ಶಿಕ್ಷೆ**

ಈತ ರಾಜಕಾರಣಿ
ಈತ ಬಾಂಬ್ ಸೃಷ್ಟಿಸಿದ
ಈತನಿಗೆ ಹತ್ತು ಬಾರುಕೋಲಿನಿಂದ ಬಾರಿಸಿರಿ
ಈತ ಧರ್ಮಗುರು
ಈತ ಬಾಂಬಿಗೆ ಧರ್ಮದ ಬಣ್ಣ ನೀಡಿದ
ಈತನಿಗೆ ಇಪ್ಪತ್ತು ಬಾರುಕೋಲಿನಿಂದ ಬಾರಿಸಿರಿ
ಈತ ಕವಿ, ಲೇಖಕ, ಕಲಾವಿದ
ಈತನಿದ್ದೂ ಬಾಂಬು ಸೃಷ್ಟಿಯಾಯಿತು
ಈತನಿಗೆ ನೂರು ಬಾರುಕೋಲಿಂದ ಬಾರಿಸಿರಿ

**- ಘನಶ್ಯಾಮ ಅಗರವಾಲ (ಅನು : ಸರಜೂ ಕಾಟ್ಕರ್)**

ಇವು ಕಿರುಗವನಗಳಲ್ಲಿ ಹೆಸರು ಮಾಡಿದ ಕೆಲವೇ ಕೆಲವು ಪ್ರಮುಖ ಕವಿಗಳನ್ನು ಪ್ರತಿನಿಧಿಸಿದ ಸಾಂಪಲ್ಲುಗಳು. ಈ ಟಿಪ್ಪಣಿಯಲ್ಲಿ ಕಿರುಗವನಗಳ ಬಗ್ಗೆ ಸುದೀರ್ಘ ವಿಶ್ಲೇಷಣೆಗೆ ಸಮೀಕ್ಷೆಗೆ ಅವಕಾಶವಿಲ್ಲವಾದುದರಿಂದಾಗಿ, ಇದೊಂದು ಪರಿಚಯಾತ್ಮಕ ಕಿರುಬರಹ. ಅಷ್ಟರ ಮಟ್ಟಿಗೆ ಇದೊಂದು ಕೈಮರ

❑

# ಅನೂಹ್ಯ ಚೇತನ - ಸತ್ಯನಾರಾಯಣ ಮುಜುಮದಾರ

ಮಲ್ಲೇಶಪ್ಪ ಸಿದ್ರಾಂಪೂರ

ಕಾವ್ಯ ಸರಸ್ವತಿ ಎಲ್ಲರಿಗೂ ಒಲಿಯುವುದಿಲ್ಲ. ಹಾಗೆಂದು ಸಾಹಿತಿಗಳಿಗಷ್ಟೇ ಒಲಿಯುತ್ತಾಳೆಂದೂ ಅಲ್ಲ. 'ನ ನೃಷ್ಠೆ ಕುರಿತೆ ಕಾವ್ಯಂ' ಋಷಿಯಾದವನು ಕವಿಯಾಗಲಾರ ಇದು ಒಂದು ಮಾತಾದರೆ, ಋಷಿಯಾದವನುಮಾತ್ರ ಕವಿಯಾಗಬಲ್ಲ ಇನ್ನೊಂದು ಮಾತು. ಆದರೆ ಈ ಎರಡು ಧೋರಣೆಗಳು ಅಪವಾದಗಳೇ. ಇದಕ್ಕೊಂದು ಉತ್ತಮ ಉದಾಹರಣೆ ಸತ್ಯನಾರಾಯಣ ಮುಜುಮದಾರ. ವೃತ್ತಿಯಿಂದ ಸಾಹಿತಿಗಳಾಗಿರದೆ ಪ್ರವೃತ್ತಿ ಸಾಹಿತಿಗಳಾದವರು ಕನ್ನಡ ಸಾಹಿತ್ಯ ಲೋಕದಲ್ಲಿ ಹಲವರಿದ್ದಾರೆ. ಸತ್ಯನಾರಾಯಣ ಮುಜುಮದಾರರು ವೃತ್ತಿಯಿಂದ ಬ್ಯಾಂಕ್ ನೌಕರರು. ಪ್ರವೃತ್ತಿಯಿಂದ ಉತ್ತಮ ಕವಿ. ಇವರು ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲೂಕಿನ ಗುಡಗುಂಟ ಗ್ರಾಮದವರು. 'ಋಷಿಕಂದ' ಕಾವ್ಯನಾಮವಾದರೆ 'ಶ್ರೀ ಪ್ರಭುವೆ' ಎಂಬುದು ಇವರ ಅಂಕಿತನಾಮ.

'ಋಷಿಕಂದ'ರ ಕಾವ್ಯ ಧೋರಣೆ 'ಋಷಿಸಂಸ್ಕೃತಿ'ಯ ಪ್ರತಿಪಾದನೆ. ಇಲ್ಲಿ 'ಋಷಿ' ಎಂದಾಕ್ಷಣ ಪರಂಪರೆಯ ಜಾಡುಗಳೆಂದಲ್ಲ. ಆಧ್ಯಾತ್ಮಿಕತೆಗೆ ಮಾತ್ರ ಸೀಮಿತಗೊಳಿಸಿ ಈ ಪದವನ್ನು ಉಪಯೋಗಿಸಬಯಸುತ್ತೇನೆ. ಋಷಿ ಸಂಸ್ಕೃತಿಯ ನೆರಳಿನಲ್ಲಿಯೇ ವಿಶ್ರಮಿಸ ಬಯಸುವ ಮುಜುಮದಾರರು ಅಧ್ಯಾತ್ಮ-ಪ್ರಕೃತಿಗಳ ಉಪಾಸನೆಯನ್ನೇ ಉಸಿರಾಡುತ್ತಾರೆ. ಅದನ್ನೇ ಕಾವ್ಯದ ಉಸಿರಾಗಿಸುತ್ತಾರೆ.

ಅಧ್ಯಾತ್ಮ ಪ್ರಪಂಚ ಮತ್ತು ನಿಸರ್ಗ ಪ್ರಪಂಚಗಳೇ ಋಷಿಕಂದರ ಪ್ರಪಂಚ. ವೈಚಾರಿಕತೆಯನ್ನು ಬಿತ್ತಿದ ಶರಣರ, ದಾಸರ – ತಿಳುವಳಿಕೆಗಳು, ಗ್ರಹಿಕೆಗಳು, ಕಾವ್ಯ ಮಾದರಿಗಳು ಇವರ ಕವನಗಳಿಗೆ ತಳಹದಿಯನ್ನು ಒದಗಿಸಿಕೊಟ್ಟಿವೆ. ಕವನಗಳು ಬೆಳೆಯುವುದೇ ಈ ನೆರಳಿನಲ್ಲಿ.

ನವೋದಯ ಸಂದರ್ಭದಲ್ಲಿದ್ದಂತಹ ಆಧ್ಯಾತ್ಮಿಕತೆ, ನಿಸರ್ಗ ಪ್ರೇಮ ಮತ್ತು ಸಾಮಾಜಿಕ ಸ್ಪಂದನೆ ಇವರ ಕಾವ್ಯದ ನೆಲೆಗಳಾಗಿವೆ. ನಿಸರ್ಗ ಪ್ರೇಮದಿಂದ ಹಾಗೂ ಸಾಮಾಜಿಕ ಕಳಕಳಿಯಿಂದ ಕೆಲವು ಕವನಗಳು ಹುಟ್ಟಿಕೊಂಡರೂ ಅವು ತಳ ಸೇರುವುದು ಅಧ್ಯಾತ್ಮದಲ್ಲಿ. ಈ ಧೋರಣೆಯಲ್ಲಿಯೇ ಅವರ ಸೊಡರಿನ ಕದಿರಲಿ, ವರ ನಿನಾದ, ಉಲಿಪು, ನಿಶ್ಯಬ್ದ ಬಾಂದಳದಲಿ, ಭಾವ ಬುಗ್ಗೆ, ಹೂ ಗೊಂಚಲು, ಅಂತಃಕರಣ, ಮೌನ ಮಿಡಿದಾಗ, ಪಡಿನೆಳಲು, ದೇವಭಾವ, ಪ್ರಭಾವಳಿ, ಅಮೃತಮಯ, ಅಂತರ್-ಪಯಣ ಭಾವ ಚಿಲುಮೆ, ಶೋಧ, ಬಿಚ್ಚು ಹೂಗಳು ಹಾಗೂ ಗೀತ ತೋರಣ ಎನ್ನುವ ಶೀರ್ಷಿಕೆಗಳೊಂದಿಗೆ ಆಧ್ಯಾತ್ಮಿಕ ಗೀತ ಗೊಂಚಲುಗಳೇನೋ ಎನ್ನುವಂತೆ ೧೭ ಕವನ ಸಂಕಲನಗಳು ಈ ಏಳೆಂಟು ವರ್ಷದಲ್ಲಿ ನಿರಾಯಾಸವಾಗಿ ಹೊರಬಂದಿವೆ. ಕವನ ಸಂಕಲನಗಳು ಸಂಖ್ಯಾ ದೃಷ್ಟಿಯಿಂದ ಬೆರಗುಗೊಳಿಸುವಂತೆ, ಸತ್ತ್ವದ ದೃಷ್ಟಿಯಿಂದಲೂ ಮನವನ್ನು ಸೆಳೆಯುತ್ತವೆ.

ತಾವು ಬೆಳೆದ ಪರಿಸರ, ಕಂಡುಂಡ ಅನುಭವಗಳು, ವೇದಾಧ್ಯಯನದ ಫಲ – ಇವು ಇವರ ಕವನದ ರಚನೆಗೆ ಪ್ರೇರಕ. ವಿಶ್ವಾಮಿತ್ರ ಮಹರ್ಷಿಗಳ ವಿಶೇಷ ಪ್ರಭಾವ ಇವರ ಕವಿತೆಯ ಮೇಲಿದೆ. ತನ್ನ ಅನುಭವದ ಪಾಡನ್ನು ಹಾಡಾಗಿ ಹಾಡಿ, ಹಾಡಿದ್ದನ್ನೇ ಅಕ್ಷರ ರೂಪಕ್ಕೆ ಎರಕಹೊಯ್ದಿದ್ದಾರೆ. ವೃತ್ತಿ ಒತ್ತಡದ ನಡುವೆಯೂ, ವೈಜ್ಞಾನಿಕ ಜಾಲಗಳು ಅರಿವಿಗೆ ಬರದಂತೆಯೇ ಮನೋಚೇತಗಳನ್ನು ತನ್ನೊಳಗೆ ಎಳೆದುಕೊಳ್ಳುತ್ತಿರುವ ಈ ಜಾಗತೀಕರಣದ ಸಂದರ್ಭದಲ್ಲಿಯೂ ಅವರ ಅಂತಃಶಕ್ತಿ ಸದಾ ಆಧ್ಯಾತ್ಮಿಕವಾಗಿಯೇ ಆಲೋಚಿಸುವಂತಿದೆ. ಈ ಮುಗ್ಧತೆಯನ್ನು ಕವಿ ಇಂತಹ ವಾತಾವರಣದಲ್ಲಿ ಇಂದಿಗೂ ಉಳಿಸಿಕೊಂಡದ್ದು ನನ್ನಂಥವರಿಗೆ ಅಚ್ಚರಿ ಮೂಡಿಸುತ್ತದೆ. ಅವರ ಕಾವ್ಯದ ಧ್ವನಿ –

ಯಾವುದೋ ಹುಚ್ಚು ಹವ್ಯಾಸಕ್ಕಾಗಿ
ಕವನ ರಚಿಸುವೆನೆಂದು
ಅನುಮಾನಿಸಬೇಡ ಗೆಳೆಯ
ಇವು ಚಿಂತನಗಳು.

ಅಂದರೆ ತಮ್ಮ ಕಾವ್ಯದ ಉದ್ದೇಶ ಚಿಂತನಾತ್ಮಕವಾದುದೆಂಬುದನ್ನು ಅವರೇ ಸ್ಪಷ್ಟಪಡಿಸಿದ್ದಾರೆ. ಪ್ರಾರ್ಥನೆ, ಮೊರೆ, ಆರ್ದ್ರತೆ, ಸಂದೇಹ, ಕಾತರ, ಶ್ರದ್ಧೆ ಭಕ್ತಿ, ಭಯ – ಇವೆಲ್ಲವೂ ಇವರ ಕವಿತೆಗಳಿಗೆ ವಸ್ತುಗಳಾಗಿವೆ.

ಸಂಸ್ಕೃತದ ಗಂಧವರಿಯದ ನನ್ನ
ವೇದಾಂಭುದಿಯಲ್ಲಿ ಮುಳಿಗಿಸಿದೆಯಾ ।
ಜಪತಪ ಯೋಗವನರಿಯದ ಎನ್ನ
ಸಾಧನೆಯ ಹುಚ್ಚನ ಮಾಡಿದೆಯಾ ಪ್ರಭುವೆ ॥

ನರ ಮಾನವನಾದ ನನ್ನಲ್ಲಿ ಈ ಸಾಧನೆಯ ಸಿದ್ಧಿಯಾದ ಹುಚ್ಚನ್ನು ತುಂಬಿದವನು ನೀನೇ ಎಂಬ ಅಂತರ್ಭಾವದ ಮಾತು ಕವಿಯ ಅಧ್ಯಾತ್ಮದ ಚಿಂತನೆಗೆ ಅಣಿಯಾದುದನ್ನು ಅಭಿವ್ಯಕ್ತಿಸಿದೆ.

ಸದಾ ಋಷಿಯ ಪ್ರಭಾವದಲ್ಲಿಯೇ ಹುಟ್ಟಿಕೊಂಡಿರುವ ಕವಿತೆಗಳು ಅಧ್ಯಾತ್ಮದಾಚೆಯದನ್ನು ಅರಗಿಸಿಕೊಂಡಿದ್ದರೂ, ಅಧ್ಯಾತ್ಮದ ಅರಿವನ್ನು ಉಣಬಡಿಸುವ ಕೆಲಸ ಮಾಡುತ್ತವೆ. ಪಂಚೇಂದ್ರಿಯಗಳ ಅರಿವೇ ಪ್ರಧಾನವಾಗಿರುವ ದೈಹಿಕ, ಮಾನಸಿಕ, ಬೌದ್ಧಿಕ ಸ್ಥಿತಿಯನ್ನು ಮೀರಿದ, ಅಲೌಕಿಕ ಅನುಭೂತಿಯಿಂದ ಕೂಡಿದ, ಲೌಕಿಕ ಭೇದಗಳಾದ ಉಚ್ಚ-ನೀಚ, ರೂಪ-ಅಪರೂಪ, ಜಡ-ಚೇತನ ಮುಂತಾದ ದ್ವಂದ್ವಗಳ ಪರಸ್ಪರ ವಿರೋಧವನ್ನು ಪರಿಹರಿಸಿ, ಅವುಗಳ ಅಂತರಂಗದ ಐಕ್ಯವನ್ನರಿಯುವ ಹವಣಿಕೆ ಇಲ್ಲಿನ ಕವಿತೆಗಳದು. ಅರಿವಿಗಾಗಿ ಪರಿತಪಿಸುವ ಮನಸ್ಸು ಮತ್ತು ಅರಿವಿಗೆ ಸುಲಭವಾಗಿ ನಿಲುಕದಿರುವ ದೇವರು ಇವರೆಡರ ನಡುವಿನ ಸಂಬಂಧವನ್ನರಿಯುವ; ಅನಾದಿಯೂ, ಅನಂತವೂ, ವಿಶ್ವ ವ್ಯಾಪಿಯೂ ಆಗಿರುವ ಪರಾಶಕ್ತಿಯ ಮಹತ್ತ್ವವನ್ನರಿತು, ಅದರೊಂದಿಗೆ ಅವಿನಾಭಾವ ಸಂಬಂಧವನ್ನು ಬೆಳೆಸುವ ಪ್ರಯತ್ನ ಋಷಿಕಂದರ ಕವಿತೆಗಳಲ್ಲಿ ಎದ್ದು ಕಾಣುತ್ತದೆ. ವರಕವಿ ಬೇಂದ್ರೆಯವರ 'ದೇವ ದೇವನ ಕರುಣೆಯಿಲ್ಲದೆ ಒಂದು ಹುಲ್ಲು ಕಡ್ಡಿಯೂ ಅಲಗಾಡಲಾರದು' ಎಂಬ ನಂಬಿಕೆಯಂತೆ, ಇಲ್ಲಿ ಋಷಿಕಂದರೂ ಸಹ ಆತ್ಮ ಪರಿತ್ಯಾಗಿಗಳಾದ ಋಷಿವರ್ಯರ ಕರುಣೆಯಲ್ಲಿದ್ದುಕೊಂಡೆ, ಮಹಾದೇವನ ಸ್ಮರಣೆಯ ಮೂಲಕ ಸಾಧನೆಯ ಸಿದ್ಧಿಯತ್ತ ಸಾಗುವ ಹಂಬಲ ವ್ಯಕ್ತಪಡಿಸಿದ್ದಾರೆ. ಏಕೆಂದರೆ –

ಹೇಗೆ ಹೊಗಳಲಿ ಋಷಿಗಳ
ಯೋಗಿಗಳ ದರುಶನದ ಫಲವ ॥
.......................................
ಮೂಢನನು ದಿನದಿನವೂ
ಗಾಢ ಚಿಂತನೆಗೆ ಹಚ್ಚುತ
ಹಾಡುಗಳು ಬರೆಸುತಲಿರುವ
ಜಡವಳಿಸಿದ ದರುಶನವ !

ದೇವನ ಸಾನಿಧ್ಯ ಪಡೆಯಲು, ಬ್ರಹ್ಮಾನಂದವನ್ನು ಅನುಭವಿಸಲು, ಭಕ್ತಿಯೇ ಮಾರ್ಗ; ಭಕ್ತಿ ಕೇವಲ ಹರಟೆಯಲ್ಲ; ಕುರುಡು ಆರಾಧನೆಯೂ ಅಲ್ಲ; ಭಗವಂತನಲ್ಲಿ ಇಟ್ಟಿರುವ ಉತ್ಕಟವಾದ ಪ್ರೇಮ ಭಾವವೇ ಭಕ್ತಿ. ಇಂತಹ ಭಕ್ತಿ ಹಾಗೂ ಜ್ಞಾನಗಳು ಸಮ್ಮಿಲನಗೊಂಡಾಗಲೇ ಸಾಧಕನ ಹಾದಿ ಸುಗಮವಾಗುತ್ತದೆ. ಇವುಗಳ ಅರಿವು

ಕವಿಗಿದ್ದುದರಿಂದಲೇ ಭಕ್ತಿ ಹಾಗೂ ಜ್ಞಾನಗಳು ಅವರ ಕವಿತೆಯಲ್ಲಿ ಓತಪ್ರೋತವಾಗಿ ಸೇರಿಕೊಂಡಿವೆ. ತತ್ತ್ವಶಾಸ್ತ್ರ ದರ್ಶನಗಳ ಅಧ್ಯಯನದ ಫಲದಿಂದಾಗಿ ಅದ್ವೈತ, ವಿಶಿಷ್ಟಾದ್ವೈತ, ದ್ವೈತದ – ತಾತ್ತ್ವಿಕ ವಿಚಾರಗಳು ಕೂಡ ಅಲ್ಲಲ್ಲಿ ಇಣುಕಿ ನೋಡುತ್ತವೆ. ದಿನನಿತ್ಯದ ಚಟುವಟಿಕೆಗಳು ಮಾನವ ಜೀವನಿಗೆ ಸಹಜವಾದವಾಗಿದ್ದರೂ, ಅದನ್ನೇ ಬೇರೊಂದರ್ಥವಲ್ಲಿ ಪರಿಭಾವಿಸಿ ಅದನ್ನೇ ಕಾವ್ಯಾತ್ಮಕವಾಗಿ ಹೇಳುವ ಶಕ್ತಿ ಋಷಿಕಂದರಿಗಿದೆ.

ಋಷಿಕಂದರ ಕವಿತೆಗಳಲ್ಲಿ ಪ್ರಮುಖವಾಗಿ ಎರಡು ಅನುಭವಗಳು ವ್ಯಕ್ತಗೊಂಡಿವೆ. ಒಂದು ಈ ಜಗದಲ್ಲಿ ಕಾಣುವ ಅಪೂರ್ಣತೆ; ಇನ್ನೊಂದು ಅಪೂರ್ಣತೆಯ ಅಂಗಗಳಾದ ಅಧರ್ಮ ಮತ್ತು ಅಜ್ಞಾನ. ಈ ಅಪೂರ್ಣತೆಯ ಅರಿವು ಪೂರ್ಣತೆಯ ಪ್ರಜ್ಞೆಯನ್ನು ಹುಟ್ಟಿಸಿ, ಪೂರ್ಣತೆಯೆಡೆಗೆ ದಾರಿ ಮಾಡಿಕೊಡುತ್ತದೆ. ಅಪೂರ್ಣವಾದ ಬಾಳು ಪೂರ್ಣವಾಗಿಬೇಕಾದರೆ ಸತ್ಯ ಮತ್ತು ಪ್ರೀತಿಯ ಭಾವಗಳು ಅವಶ್ಯ. ಇವುಗಳ ಸಮಾಗಮವೇ ಆನಂದ. ಈ ಆನಂದ ಹುಟ್ಟುವುದಕ್ಕೆ ಗುರುವಿನ ಕೃಪೆ, ರಕ್ಷಣೆ ಅವಶ್ಯ. ಹಾಗೂ ಸಾಧನೆಯ ಹಾದಿಯನ್ನು ದಾಟಿ ಆನಂದ ಹೊಂದುವುದಕ್ಕೇ ದೃಢ ನಿರ್ಧಾರವೂ ಬೇಕು. ಅದೊಂದು ರೀತಿಯ ಸತ್ವ ಪರೀಕ್ಷೆಯ ಕಾಲ. ಆದರೂ ಎದೆಗುಂದದೇ ದಾಟಿದರೆ ಆನಂದವೇ ಆನಂದ. ಇಂತಹ ಆನಂದಕ್ಕಾಗಿ ಜೀವನದ ತಿರುಳನ್ನು ಅರಿಯುವ ಬಯಕೆ. ಅದರ ತಿಳಿವಿಗಾಗಿ ಹಾತೊರೆಯುತ್ತಾ, ಆನಂದದ ಹೊಸ ಬೆಳಕಿಗಾಗಿ ಪರಿತಾಪ ಕವಿಯಲ್ಲಿದೆ. ಅದಕ್ಕಾಗಿಯೇ ಅವರು ಋಷಿಯ ದರ್ಶನಕ್ಕಾಗಿ ಕಾಯುತ್ತಾ –

ಕಾಯತಿರುವೆನು ಪ್ರಮಾಥಿಯ ಚೈತ್ರದಿಂದ
ನೀನು ಬರುವ ಕುರುಹು ಕಾಣುತಿಲ್ಲ ಇನ್ನು
ನನ್ನಲ್ಲಿಹ ಲೋಪ ತಿಳಿಯುತ್ತಿಲ್ಲೆನಗೆ
ಲೋಪವ ತಿಳಿಸೆನಗೆ ಕರುಣಾ ಮೂರ್ತಿಯೇ ॥

ಋಷಿಗಳ, ಯೋಗಿಗಳ ಅನುಗ್ರಹ, ದರ್ಶನ ಪಡೆದರೂ ಜ್ಞಾನದ ಬೆಳಕನ್ನು ಕಾಣಲು ಸಾಧನೆ ಅವಶ್ಯ. ಆ ಸಾಧನೆಯಲ್ಲಿ ಕರುಳು ಕುದಿದು ಹಾಲಾದಾಗಲೇ ದಿವ್ಯದೃಷ್ಟಿ ಮೂಡುತ್ತದೆ. ಈ ಜೀವನ ದಿವ್ಯ ದೃಷ್ಟಿಯನ್ನು ಪಡೆದು ಅಮಿತಾನಂದ ಹೊಂದುವುದಕ್ಕೆ ಕಷ್ಟಪಡಬೇಕಾದುದು ಅನಿವಾರ್ಯ ಎಂಬ ಪ್ರಜ್ಞೆಯೂ ಕವಿಯಲ್ಲಿದೆ.

ಋಷಿಕಂದರಲ್ಲಿ ಅಧ್ಯಾತ್ಮದಂತೆ ನಿಸರ್ಗ ಪ್ರೀತಿಯೂ ಇದೆ. ಆದರೆ ಅದು ಕೇವಲ ಸೌಂದರ್ಯಾನುಭವದಲ್ಲಿಯೇ ಮುಗಿಯುವಂತಹದ್ದಲ್ಲ; ಅದು ಆಧ್ಯಾತ್ಮಿಕವೂ ಹೌದು ಎನ್ನುವ ಅಂಶ ಇವರ ಕವಿತೆಗಳಲ್ಲಿ ವ್ಯಕ್ತವಾಗಿದೆ. ಋಷಿಕಂದರ ಪ್ರಕೃತಿ ಪ್ರೇಮ ಬಾಹ್ಯ ಪ್ರೇರಣೆಯಿಂದಾಗಲಿ, ನಿಸರ್ಗದ ವರ್ಣನೆ ಕುರಿತು ಓದಿಯಾಗಲಿ ಬಂದದ್ದಲ್ಲ. ಅದು ಹುಟ್ಟಿನೊಂದಿಗೆ ಬಂದದ್ದೆಂದು ಭಾವಿಸಿದ್ದೇನೆ. ಏಕೆಂದರೆ ಅವರು ಅದ್ವೈತಾನುಭವದ ನೆಲೆಯಲ್ಲಿ ಸೃಷ್ಟಿಯ ಮೂಲ ಚೈತನ್ಯದ ದರ್ಶನವನ್ನು ಪಡೆಯುವುದಕ್ಕಾಗಿ ಹಂಬಲಿಸುತ್ತಾರೆ. ಆದ್ದರಿಂದಲೇ ಅವರ ನಿಸರ್ಗ ಪ್ರೀತಿ ಕೇವಲ ಸೌಂದರ್ಯ ನಿಷ್ಠೆಯಲ್ಲದೆ, ಜೀವನ ಪ್ರೀತಿಗಾಗಿಯೂ ವಿಸ್ತತಗೊಂಡಿದೆ. ಭೌತಿಕವಾಗಿ, ಮಾನಸಿಕವಾಗಿ, ಆಧ್ಯಾತ್ಮಿಕವಾಗಿ ಈ ನಿಸರ್ಗ ಪ್ರೀತಿ ನಮ್ಮ ಅಸ್ತಿತ್ವಕ್ಕೆ ಎಷ್ಟು ಅಗತ್ಯ ಎನ್ನುವುದನ್ನು ಕವಿ ಅರಿತುಕೊಂಡಿದ್ದಾರೆ –

ನಿಸರ್ಗದಲಿಹ ಚಿರಂತನ
ನಿರಂತರ ರಚನಾತ್ಮಕ
ಕ್ರಿಯೆಯನು ಕಾಣುತ
ವಿಸ್ಮಯಹೊಂದಿ ನಾನು
ರಚನಾತ್ಮಕ ಕ್ರಿಯೆಗೆ
ಶರಣೆಂದೆ ಪ್ರಭುವೆ ॥

ಪ್ರಕೃತಿ ಆರಾಧನೆಯಲ್ಲಿಯೇ ಪರಮಾತ್ಮನ ಆರಾಧನೆಯನ್ನು ಕಾಣುವ ಕವಿಗೆ ಪ್ರಕೃತಿಯೇ ಪರಮಾತ್ಮನ ರಸಾನಂದದ ಬೃಹತ್ ಪ್ರತಿಮೆಯಾಗುತ್ತದೆ. ಆತನಿಗೆ ಅಲ್ಲಿ ಸಕಲ ಆರಾಧನ, ಸಾಧನ, ಬೋಧನದ ಸಿದ್ಧಿ ಲಭಿಸುತ್ತದೆ. ಇಂತಹ ಪ್ರಕೃತಿ ಮನುಷ್ಯನ ಸೌಂದರ್ಯ ಪ್ರಜ್ಞೆಗೆ, ರಸಾಸ್ವಾದನೆಗೆ ವಿಷಯವಾದಾಗ, ನೈಸರ್ಗಿಕ ಸಂಪತ್ತು ಮನುಷ್ಯನ ಅಭ್ಯುದಯಕ್ಕೆ ಕಾರಣವಾದಾಗ ಆ ಪ್ರಕೃತಿಯನ್ನು ಕಾಣುವ ಕಣ್ಣುಳ್ಳವರು ಪುಳಕಿತರಾಗಿ, ರೋಮಾಂಚಿತರಾದಾಗ ಅವರ ಭಾವನೆಗಳು ಉಕ್ಕಿದಾಗ, ಅಂತಹ ಭಾವನೆಗಳನ್ನು ಶಬ್ದ ರೂಪದಲ್ಲಿ ತಂದು ಅದಕ್ಕೆ ಕಾವ್ಯದ ರೂಪ ಕೊಡುತ್ತಾರೆ. ಅದುವೇ ನಿಜವಾದ ನಿಸರ್ಗ ಸೌಂದರ್ಯದ ರಸಾನುಭವವನ್ನು ಅನುಭವಿಸಿದ ಧನ್ಯಜೀವ. ಅಂತಹ ಸೌಂದರ್ಯಾನುಭೂತಿ ಋಷಿಕಂದರಿಗಿದೆ. ಹಾಗಾಗಿಯೇ ಸೌಂದರ್ಯ ತತ್ತ್ವದ ಅನುಭಾವಿಕ ಮತ್ತು ತಾತ್ತ್ವಿಕ ಅಂಶಗಳು ಅವರ ಕವನಗಳನ್ನು ಆಕ್ರಮಿಸಿಕೊಂಡಿವೆ. ಒಂದೆಡೆ ಕಣ್ಣ ಮುಂದಿನ ನಿಸರ್ಗ ಸೌಂದರ್ಯವನ್ನು ಗಮನಿಸುತ್ತಾ, ಅದರ ಸೌಂದರ್ಯದ ಸೊಗಸುಗಳನ್ನು ಆರಾಧಿಸುತ್ತಾ, ಇದೇ ಬದುಕಿನ ಪರಮ ಗುರಿಯೇನೋ ಎಂದು ಭ್ರಮಿಸುತ್ತಾ, ಇನ್ನೊಂದೆಡೆ ನಮ್ಮ ಸುತ್ತಲಿನ ನಿಸರ್ಗದ ಸೌಂದರ್ಯವನ್ನು ನಾವೆಲ್ಲರೂ ಅನುಭವಿಸಿದಾಗ ಪ್ರಕೃತಿಯು ತನ್ನ ಸಾರ್ಥಕತೆಯನ್ನು ಪಡೆದುಕೊಂಡಂತೆ. ನಾವೇಕೆ ಇನ್ನೊಬ್ಬರಿಗೆ ಆನಂದವನ್ನುಣಿಸಿ ಸಾರ್ಥಕತೆಯನ್ನು ಪಡೆಯಲಾಗುತ್ತಿಲ್ಲ ಎಂಬ ಕೊರಗು ಕವಿಗಿದೆ. ಅದಕ್ಕಾಗಿಯೇ ಅವರು –

ಮಿಂಚಿಮಾಯವಾಗುವ ಕೋಲ್ಮಿಂಚೇ
ಹಸಿರೆಲೆಯ ಹೊತ್ತ ಸಸ್ಯರಾಶಿಯೇ
ಜುಳು ಜುಳು ಹರಿಯುವ ತೊರೆಯೇ
ಭೋರ್ಗರೆವ ನದಿನದಗಳೇ
ಧುಮುಕುವ ಜಲಪಾತವೇ
ಅಲೆಯುಕ್ಕಿಸುವ ಕಡಲುಗಳೇ।

........................................
ಶ್ರೀ ಪ್ರಭುವಿನ ಸೃಷ್ಟಿಯಾಗಿಹ ನೀವು
ಇಷ್ಟು ಆನಂದವನುಣಿಸುವಾಗ
ಶ್ರೀ ಪ್ರಭುವಿನ ಸೃಷ್ಟಿಯಾಗಿಹ ನಾನು
ಸ್ವಲ್ಪ ಆನಂದವನುಣಿಸಲಿಲ್ಲೆಂಬ
ಚಿಂತೆ ಕಾಡುತಿದೆ ದಿನವೂ ನನ್ನ॥

ಎಂದು ತಮ್ಮ ಸಾರ್ಥಕತೆ ಸಾಧ್ಯವಾಗದ್ದಕ್ಕೆ ಮಮ್ಮಲ ಮರಗುತ್ತಾರೆ. ಹಾಗೆಯೇ ಋಷಿಕಂದರು ಪ್ರಕೃತಿ ಮತ್ತು ಮನುಷ್ಯನ ನಡುವೆ ಇರುವಂತಹ ಅರ್ಥಪೂರ್ಣ ಸಂಬಂಧಗಳನ್ನು ಹುಡುಕುವತ್ತ ಪ್ರಯತ್ನಿಸುತ್ತಾರೆ.

ಋಷಿಕಂದರ ಆಧ್ಯಾತ್ಮಿಕ ಮತ್ತು ನಿಸರ್ಗ ಪ್ರೀತಿಯ ನಡುಯೂ ಸಾಮಾಜಿಕ ಸ್ಪೃಹತೆ ಜಾಗ್ರತಗೊಂಡಿದೆ. ಯಾಕೆಂದರೆ ಒಂದು ಕವಿತೆ ಅಂದಂದಿನ ಸಾಮಾಜಿಕ ಸಂದರ್ಭದಲ್ಲಿಯೇ ಹುಟ್ಟಿಕೊಳ್ಳುವುದರಿಂದ ಅದು ಅಂದಿನ ಸಾಮಾಜಿಕ ಆಶೋತ್ತರಗಳಿಗೆ ಪ್ರತಿನಿಧಿಯಾಗುವುದು ಅನಿವಾರ್ಯ. ಅದು ಋಷಿಕಂದರವನ್ನೂ ಸಹ ಸುತ್ತುವರಿದಿದೆ. ಋಷಿಕಂದರು ತಮಗಿರುವ ವಿಶಿಷ್ಟ ಪ್ರಜ್ಞೆಯಿಂದ ಸುತ್ತಣ ಸಮಾಜದಲ್ಲಿನ ನಂಬಿಕೆಗಳನ್ನು, ತುಡಿತ–ಮಿಡಿತಗಳನ್ನು ತಮ್ಮ ಕವನಗಳಲ್ಲಿ ಅಭಿವ್ಯಕ್ತಿಸಿದ್ದಾರೆ. ಒಳನೋಟಗಳು ತೀವ್ರವಾಗಿ ಆಧ್ಯಾತ್ಮಿಕ ಸತ್ಯಗಳು ಹೊರಹೊಮ್ಮಿದಂತೆ, ಹೊರನೋಟ ಪ್ರಖರವಾಗಿ ಲೌಕಿಕ ಸತ್ಯಗಳೂ ಹೊರಹೊಮ್ಮಿ ಋಷಿಕಂದರ ಲೇಖನಿಯಿಂದ ಕವಿತೆಯ ರೂಪ ಪಡೆದಿವೆ.

ಸಾಮಾಜಿಕ ಹಿತದೃಷ್ಟಿಯನ್ನಿಟ್ಟುಕೊಂಡು ರಚಿತವಾದ ಋಷಿಕಂದರ ಕವನಗಳಿಗೆ ಶರಣರ ಹಾಗೂ ದಾಸರ ಪ್ರಭಾವವಾಗಿದೆ. ಈ ಸಮಾಜದ ಸ್ಥಿತಿಗತಿಗಳನ್ನು ದಾಸರು ಕೀರ್ತನ ರೂಪದಲ್ಲಿ ಹಾಡಿದಂತೆ

ಅದ್ವೈತ ದ್ವೈತಗಳೆಂಬ ಮತಗಳು ನಂಬಿ
ಗುದ್ದಾಡುವ ವಾದಿಗಳಿಗೇನೆನ್ನಲಿ॥

..........................................

ತಾಮಸ ಭಾವನೆಗಳನು ತೊರೆಯದೆ
ಸಮಾಜವನೊಡೆಯುವವರಿಗೇನೆನಲಿ ಶ್ರೀ ಪ್ರಭುವೆ॥

ಎನ್ನುವ ಮೂಲಕ ದೇವರು, ಧರ್ಮ, ಪವಿತ್ರಗ್ರಂಥ, ಮಂತ್ರ, ತಂತ್ರ, ಪೂಜೆ, ಭಕ್ತಿ, ಮಡಿ-ಮೈಲಿಗೆ, ಸಂಪ್ರದಾಯಗಳ ಹೆಸರಿನಲ್ಲಿ ಪ್ರತಿನಿತ್ಯ ನಡೆಯುತ್ತಿರುವ ಸಾಮಾಜಿಕ ವಿಷಯ ಸ್ಥಿತಿಗಳ ಕುರಿತು ಆತಂಕ ವ್ಯಕ್ತಪಡಿಸಿದ್ದಾರೆ. ಶರಣರು, ದಾಸರು ನಡೆದಾಡಿದ ನೆಲದಲ್ಲಿ ಜನಿಸಿದ ಋಷಿಕಂದರು ಸಹಜವಾಗಿಯೇ ಅವರಂತೆ ಇವರೂ ಕೂಡ ಸಾಮಾಜಿಕ ಸಮಾನತೆಯ ತತ್ತ್ವವನ್ನು ಸಾರುತ್ತಾರೆ. ಮೇಲು-ಕೀಳು, ಸ್ಪರ್ಶ-ಅಸ್ಪರ್ಶ ಎಂಬ ಜಾಡ್ಯಗಳನ್ನು ತೊರೆದು, ದಯೆ, ಕರುಣೆ, ಪ್ರೀತಿಗಳನ್ನು ಧರಿಸಿ ಮಾನವರು ಮಾನವರಂತಾಗಬೇಕು ಎಂದು ಅಪೇಕ್ಷಿಸುತ್ತಾರೆ. ಮಾನವನ ಜೀವನ ಪರಿಪೂರ್ಣವಾಗಬೇಕಾದರೆ ಲೌಕಿಕ ವಿದ್ಯೆಯೊಂದಿಗೆ ಪಾರಮಾರ್ಥಿಕ ಸಾಧನೆಯತ್ತಲೂ ಗಮನ ಹರಿಸಬೇಕು ಎನ್ನುವುದನ್ನು ಮಾತ್ರ ಮರೆಯುವುದಿಲ್ಲ.

ಇಲ್ಲಿಯವರೆಗೆ ಸುಮಾರು ೧೭ ಕವನ ಸಂಕಲನಗಳನ್ನು ಪ್ರಕಟಿಸಿರುವ ಹಾಗೂ ಇನ್ನು ಪ್ರಕಟಿಸಬೇಕೆಂದು ಹಂಬಲ ಹೊಂದಿರುವ ಅವರ ಕವಿತ್ವ ಹಾಗೂ ಸಾಹಿತ್ಯಾಸಕ್ತಿ ಮೆಚ್ಚುವಂತಹದ್ದೆ. ಇವರ ಬಹುತೇಕ ಕವನಗಳು ಆಧ್ಯಾತ್ಮಿಕತೆಯಿಂದ ಸ್ಫೂರ್ತಿಗೊಂಡಿದ್ದರೂ ಅಲ್ಲಿ ನಿಸರ್ಗಪ್ರೇಮ ಮತ್ತು ಸಾಮಾಜಿಕ ಕಳಕಳಿ ವ್ಯಕ್ತಗೊಂಡಿರುವುದನ್ನು ತಳ್ಳಿಹಾಕುವಂತಿಲ್ಲ. ಇವರು ಕವಿತೆ ಬರೆಯಬೇಕೆಂದು ಬರೆದವರಲ್ಲ. ತಮಗಾದ ಅನುಭವವನ್ನು ತಮಗನಿಸಿದಂತೆ ಅಕ್ಷರ ರೂಪಕ್ಕಿಳಿಸಿದಾದರೆ. ಇಲ್ಲಿನ ಕವಿತೆಗಳಿಗೆ ಯಾವ ಛಂದಸ್ಸಿನ ಬಂಧವಿಲ್ಲ; ಪ್ರಾಸದ ತ್ರಾಸು ಇಲ್ಲ. ಆಡು ಭಾಷೆಯಲ್ಲಿಯೇ ರಚಿತಗೊಂಡಿರುವುದರಿಂದ ಸರಾಗವಾಗಿಯೇ ಓದಿಸಿಕೊಂಡು ಹೋಗುತ್ತವೆ. ಆದರೆ ಕೆಲವೊಂದು ಸಂದರ್ಭದಲ್ಲಿ ಸರಳವಾಗಿ ಹೋಗುತ್ತದೆ ಎನ್ನುವಾಗ ಕಠಿಣ ಪದಗಳು ಪ್ರವೇಶ ಪಡೆದು ಸರಾಗಕ್ಕೆ ಅಡ್ಡಿಯನ್ನುಂಟು ಮಾಡುವ ಅಪಾಯವಿದೆ. ಭಾವಗೀತೆಯ ಗೇಯತೆ ಇರುವುದರಿಂದಲೇ ಇವರ ಕೆಲ ಕವನಗಳು ಓದುಗರಿಗೆ ಭಾವನ ಪ್ರಪಂಚದ ಸವಿಯನ್ನು ಉಣಬಡಿಸುತ್ತವೆ. ಕೆಲವು ಓದಿದರೆ ಗದ್ಯವಾಗುವ, ಹಾಡಿದರೆ ಹಾಡಾಗುವಂತಿದ್ದರೆ, ಇನ್ನು ಕೆಲವು ದಾಸರ ಕೀರ್ತನೆಗಳ ಮಾದರಿಯಲ್ಲಿವೆ.

ಒಟ್ಟಿನಲ್ಲಿ ಉತ್ತಮ ಕವಿತ್ವದ ಲಕ್ಷಣಗಳೊಂದಿಗೆ ಕಾವ್ಯ ಪ್ರಪಂಚದಲ್ಲಿ ವಿಹರಿಸುತ್ತಿರುವ ಋಷಿಕಂದರು ತಮ್ಮ ಸ್ಮರಣೆ, ಮನನ, ಚಿಂತನ, ಮಂಥನ, ಧ್ಯಾನದಿಂದ ಪಡೆದ ಎಳೆಗಳಿಂದ ಕಲ್ಪನೆಗೆ ಹುರಿಹಾಕಿ ಕವನ ರಚಿಸುತ್ತಾರೆ. ಅವರೇ ಹೇಳುವಂತೆ -

ನಾನು ಬರೆದ ಕವನ ಕೇವಲ ಕವನವಲ್ಲ
ಎನ್ನ ಮನದ ಅನುಭವದ ರಸವದು

.....................................................

ದೇವತೆಗಳು ಮೀರಿ ವಿಭೂತಿ ರೂಪಗಳ ಮೀರಿ
ದೇವಶ್ರೀಪ್ರಭುವನು ಕಾಣುವವನ ವಚನವಿದು॥

ಹೀಗೆ ಋಷಿಕಂದರ ಕವನಗಳು ಜಾಗತೀಕರಣದ ಸೆಲೆಯಲ್ಲಿ ಕೊಚ್ಚಿ ಹೋಗದೇ ನಿಂತು ಈ ನೆಲದ ಸವಿಯನ್ನು ಹೀರಿಕೊಳ್ಳುತ್ತವೆ. ಮೊಗ್ಗಾಗ್ಗಿ, ಹೂವಾಗಿ, ಕಾಯಾಗಿ, ಹಣ್ಣಾಗ್ಗಿ, ನಮಗೂ ಉಣಬಡಿಸುತ್ತವೆ. ಆಧ್ಯಾತ್ಮಿಕ ಜಗತ್ತು, ನಿಸರ್ಗ ಜಗತ್ತುಗಳ ಅವಿನಾಭಾವ ಸಂಬಂಧ ಮತ್ತು ಆ ಎರಡು ಜಗತ್ತುಗಳು ಕಲಿಸಿಕೊಡುವ ಮಾನವೀಯ ಅನುಕಂಪಗಳನ್ನು ಇವರ ಕವನ ಸಂಕಲನಗಳು ಸಮರ್ಪಕವಾಗಿ ಹಿಡಿದಿಡುತ್ತವೆ.

❑

೭

# ಹೈಟೆಕ್ ಯುಗಕ್ಕೆ 'ಕನಕ ಮುಸುಕು'

## ಬಿ.ಎಸ್. ಚಂದ್ರಶೇಖರ್

ಕೃಷಿ ವಿಶ್ವವಿದ್ಯಾಲದಲ್ಲಿ ವಿಜ್ಞಾನಿಯಾಗಿ ಕಾರ್ಯನಿರತರಾಗಿರುವ ಡಾ|| ಕೆ.ಎನ್. ಗಣೇಶಯ್ಯ ಅವರು ರಚಿಸಿರುವ 'ಕನಕ ಮುಸುಕು' ಕಾದಂಬರಿ ಹಲವು ನಿಟ್ಟುಗಳಿಂದ ಗಮನ ಸೆಳೆಯುತ್ತದೆ. ಪತ್ತೇದಾರಿ ಶೈಲಿಯ ಕಾದಂಬರಿಯಾದರೂ ಇತಿಹಾಸ, ಸಂಶೋಧನೆ, ಪ್ರಾಚ್ಯಶಾಸ್ತ್ರ ಪುರಾತತ್ತ್ವ ವಿಜ್ಞಾನ, ಮಾಹಿತಿ ತಂತ್ರಜ್ಞಾನ ಎಲ್ಲವೂ ಇಲ್ಲಿ ಮೇಳೈಸಿವೆ. 'ಸುಧಾ' ವಾರಪತ್ರಿಕೆಯಲ್ಲಿ ೨೦೦೫ರಲ್ಲಿ ಧಾರಾವಾಹಿಯಾಗಿ ಓದುಗರಿಗೆ ಪುಳುಕ ನೀಡಿದ ಕೃತಿ ೨೦೦೭ರಲ್ಲಿ ಪುಸ್ತಕ ರೂಪದಲ್ಲಿ ಪ್ರಕಟವಾಗಿದೆ.

ಮೊದಲಿಗೆ ಕಾದಂಬರಿಯ ಹಂದರವನ್ನು ಸ್ಥೂಲವಾಗಿ ಹೀಗೆ ಗ್ರಹಿಸಬಹುದು :

ಬ್ಯಾಂಕಾಕ್ ವಿಮಾನ ನಿಲ್ದಾಣದ ಬಳಿಯ ಪ್ರಮುಖ ಹೋಟೆಲೊಂದರಲ್ಲಿ ನಿಗೂಢ ರೀತಿಯಲ್ಲಿ ದಂಪತಿಗಳ ಕೊಲೆಯಾಗುತ್ತದೆ. ಎಂಟು ತಿಂಗಳ ಮಗು ಅನಾಥವಾಗಿ ಅಳುತ್ತಿರುತ್ತದೆ.

ಹನ್ನೆರಡು ವರ್ಷಗಳ ನಂತರ ಕತೆ ಆರಂಭವಾಗುತ್ತದೆ. ದಕ್ಷಿಣ ಭಾರತದ ಜೈನ್ ಐಕಾನ್‌ಗಳ ಬಗ್ಗೆ ಸಂಶೋಧನೆಯಲ್ಲಿ ತೊಡಗಿರುವ ಡಾ|| ಪೂಜಾ ಈ ಕಾದಂಬರಿಯ ನಾಯಕಿ. ಮುಖ್ಯವಾಗಿ ಜೈನ ಕಲ್ಪವೃಕ್ಷದ ಮೂಲವನ್ನು, ಅದರ ಒಳ ಅರ್ಥವನ್ನು ಕಂಡು ಹಿಡಿಯುವುದು ಪೂಜಾಳ ಗುರಿ.

ಕ್ರಿ.ಪೂ. ೩ನೇ ಶತಮಾನದಲ್ಲಿ ಜೈನಮುನಿಗಳ ಮೂಲಕ ಉತ್ತರದಿಂದ ದಕ್ಷಿಣಕ್ಕೆ ಹನ್ನೆರಡು ಸಾವಿರ ಜೈನ ಮುನಿಗಳ ಜೊತೆಗೆ ಹತ್ತು ಸಾವಿರ ರಥಗಳು, ಮುಸುಕಿನಜೋಳದ ತೆನೆಗಳ ಜತೆ ಬಂಗಾರದಲ್ಲಿ ಮಾಡಿದ ಅದೇ ರೀತಿಯ ತೆನೆಗಳ ರೂಪದಲ್ಲಿ ಪ್ರತಿರಥದಲ್ಲಿ ಒಂದು ಸಾವಿರ ತೆನೆಗಳಂತೆ ಅಪಾರ ಪ್ರಮಾಣದ ಸಿರಿಯನ್ನು ವರ್ಗಾಯಿಸಲಾಯ್ತೆಂಬ ಉಲ್ಲೇಖದ ಬೆನ್ನು ಹತ್ತಿದ ಸಂಶೋಧನೆ ಹಲವು ತಿರುವುಗಳನ್ನು ಪಡೆದುಕೊಳ್ಳುತ್ತದೆ. ಕೆಲವು ನಿರ್ದಿಷ್ಟ ಪ್ರಾಚೀನ ಜೈನ ದೇಗುಲಗಳಲ್ಲಿ ಚರ್ಮದ ಚೀಲಗಳಲ್ಲಿಟ್ಟಿರಬಹುದಾದ ಆ ನಿಧಿಯ ಜಾಡು ಹಿಡಿದು ಅದನ್ನು ವಶ ಪಡಿಸಿಕೊಳ್ಳಲು ದುಷ್ಕರ್ಮಿಗಳ ಹುನ್ನಾರ, ಈ ಸಂಶೋಧನೆ ನಡೆಸುತ್ತಿರುವ ಡಾ|| ಪೂಜಾ ದುಷ್ಕರ್ಮಿಗಳಿಂದ ಹತ್ಯೆಗೊಳಗಾಗುವ ಅಪಾಯವಿದ್ದು ಜೈನ ಧರ್ಮ ಸಂರಕ್ಷಣಾ ವೇದಿಕೆಯ ಅಧ್ಯಕ್ಷರಾದ ಉದ್ಯಮಿ ಬ್ರಹ್ಮಪ್ರಕಾಶ್ (ಬಿಪಿ) ಅವರ ಮುಂದಾಲೋಚನೆಯಿಂದ ಎಡಿನ್ ಬರೋದಲ್ಲಿದ್ದ ಡಾ|| ಪೂಜಾಗೆ ಪೋಲೀಸರಿಂದ ರಕ್ಷಣೆ. ಈ ಹಿನ್ನೆಲೆಯಲ್ಲಿ ಡಾ|| ಪೂಜಾರ ಸಂಶೋಧನಾ ಮಾರ್ಗದರ್ಶಕರಾದ ಡಾ|| ರಾವ್ ಅವರನ್ನು ಬಿಪಿ ಮುಂಬೈಗೆ ಕರೆಸಿಕೊಳ್ಳುತ್ತಾರೆ. ಡಾ|| ಪೂಜಾ ವಿದೇಶದಿಂದ ಕರೆಮಾಡಿ ಭಾರತದಲ್ಲಿದ್ದ ತನ್ನ ಪತಿ ವಿನೋದ್‌ರನ್ನು ಲಂಡನ್ನಿಗೆ ಕರೆಸಿಕೊಂಡು ಅವನೊಡನೆ ಮುಂಬೈಗೆ ಬರುತ್ತಾಳೆ.

ದೊರೆತ ನಕಾಶೆಗಳು, ಅಧ್ಯಯನ / ವಿಶ್ಲೇಷಣೆಗಳಿಂದ ಅವುಗಳ ಸ್ಪಷ್ಟ ಅರ್ಥಕ್ಕಾಗಿ ಶೋಧನೆ, ಭೂಗತ ವ್ಯಕ್ತಿಗಳು ಪೂಜಾಳ ಸಂಶೋಧನೆಯ ಜಾಡು ಹಿಡಿಯುವುದು, ಅವರ ಗುಂಪು 'ನಿಧಿ' ಇದ್ದ ದೇವಸ್ಥಾನದ ಬಳಿ ಬಂದಾಗ ಅವರನ್ನು ಟ್ರ್ಯಾಪ್ ಮಾಡಿದ್ದು ಆದರೆ ವಾಸ್ತವವಾಗಿ ಅಲ್ಲಿ ನಿಧಿ ಇಲ್ಲದೆ ನಕಲಿ ಚೀಲಗಳೇ ಇರುವುದನ್ನು ಕಂಡು ಅಚ್ಚರಿಗೊಂಡ ಪೂಜಾಗೆ ಬಿಪಿಯವರ ಮೇಲೇ ಅನುಮಾನ, ಅವರ ಉದ್ದೇಶಗಳ ಬಗ್ಗೆಯೇ ಸಂಶಯ. ಕೊನೆಗೆ ಡಾ|| ಪೂಜಾರ ಪುಟ್ಟ ಮಗಳು ಪುಣ್ಯಳ ಅಪಹರಣ, ಆತಂಕ, ಅನುಮಾನಗಳು; ಗುಪ್ತ ಸ್ಥಳದಲ್ಲಿ ಪುಣ್ಯಳ ಜತೆಗೆ ಬಿಪಿಯವರ ಮೊಮ್ಮಗಳಾದ ಅತ್ತಿಮಬ್ಬೆಯೂ ಜತೆಯಾಗಿದ್ದುದಲ್ಲದೆ ಆಗಾಗ್ಗೆ ಬಿಪಿಯವರೊಡನೆ ಮಾತು, ಕೆಲವು ಬಾರಿ ಗಣಕದ ತೆರೆಯಲ್ಲಿ ಪುಣ್ಯಳಿಗೆ ತಾಯಿಯನ್ನು ನೋಡುವ ಅವಕಾಶ. ಕೊನೆಗೆ ಆ ಅಪಹರಣವೂ ಬಿಪಿಯವರ ದೂರದೃಷ್ಟಿಯ ತಂತ್ರವೇ ಎಂದು ತಿಳಿದು ಆಶ್ಚರ್ಯ ! ಹನ್ನೆರಡು ವರ್ಷಗಳ ಹಿಂದೆ ಬ್ಯಾಂಕಾಕ್

ಹೋಟೆಲಿನಲ್ಲಿ ಕೊಲೆಯಾದ ದಂಪತಿಗಳ ಮಗುವೇ ತನ್ನ ಮೊಮ್ಮಗಳಾದ ಅತ್ತಿಮಬ್ಬೆ ಎಂದು ಕೊನೆಗೆ ಬಿಪಿ ತಿಳಿಸುತ್ತಾರೆ. ಇಷ್ಟೆಲ್ಲಾ ಮಾಡಿದ ಬಿಪಿ ಅವರ ಬಗ್ಗೆ ಪೂಜಾಗೆ ಗೌರವ ಮೂಡಿದರೂ ತಾನೆಲ್ಲೋ ಮೋಸ ಹೋಗಿದ್ದೇನೆ ಎಂಬ ಭಾವನೆ ಮತ್ತೆ ಮತ್ತೆ ಸುಳಿಯುತ್ತದೆ.

ಡಾ॥ ಪೂಜಾ ಸಂಶೋಧಿಸಿದಂತೆ ಪ್ರಾಚೀನ ದೇಗುಲಗಳಲ್ಲಿ ಶೇಖರವಾಗಿದ್ದ ಆ ನಿಧಿ ಏನಾಯಿತು ? ಕೃತಿಯ ಕೊನೆಯ ಹಂತದಲ್ಲಿ ಈ ಕುತೂಹಲವೂ ತಣಿಯುತ್ತದೆ. ನಿಧಿಗಳನ್ನು ಕದಿಯಲು ನೂರಾರು ವರ್ಷಗಳಿಂದ ಪ್ರಯತ್ನಗಳು ನಡೆಯುತ್ತಲೇ ಇದ್ದವು. ಜೈನ ಧರ್ಮ ಸಂರಕ್ಷಣಾ ಸಂಘವು ನಿಧಿಗಳ ರಹಸ್ಯದ ಆಳಕ್ಕೆ ಹೋಗಿ ಎಲ್ಲ ಬಸದಿ / ಜಿನಾಲಯಗಳಲ್ಲಿದ್ದ ನಿಧಿಯನ್ನು ತೆಗೆದು ಸಂಗ್ರಹಿಸಿತ್ತು. ಈ ಸಂಗ್ರಹಕಾರ್ಯದಿಂದ ನಿಧಿಗಳ ಮೂಲ ಉದ್ದೇಶವಾದ ಜೈನಧರ್ಮದ ಸಂರಕ್ಷಣೆಯಾಗುವುದರ ಜತೆಗೆ ನಿಧಿಗಳ ಆಸೆಯಿಂದ ಆಗಾಗ್ಗೆ ಬಸದಿಗಳ ಮೇಲಿನ ದಾಳಿ, ಜಿನಾಲಯಕ್ಕೆ ಹಾನಿ ಆಗುತ್ತಿತ್ತು. ಅದನ್ನು ತಡೆದು ಕಳ್ಳರ ಗುಂಪುಗಳನ್ನು ಹಿಡಿಯಲು ಬಿ.ಪಿ. ಹೂಡಿದ ತಂತ್ರವೇ ಈಗ ನಡೆದದ್ದು. ಅದನ್ನು ಡಾ॥ ಪೂಜಾಗೆ ವಿವರಿಸಿದ್ದಲ್ಲದೆ ಅವಳನ್ನು ಕಾಡು ಪ್ರದೇಶದಲ್ಲಿನ ಗುಪ್ತ ಜೈನ ಗುಹೆಗೆ ಕರೆದೊಯ್ದು ಅಲ್ಲಿ ತಪೋನಿರತರಾದ ಜೈನ ದಿಗಂಬರ ಮುನಿಗಳನ್ನೂ ಬಾವಿಯಂಥ ಕಣಜದಲ್ಲಿ ಸಂಗ್ರಹವಾದ ಬಂಗಾರದ ತೆನೆಗಳನ್ನೂ ಬಿಪಿ ತೋರಿಸುತ್ತಾರೆ.

ಪೂಜಾಳ ಮಹತ್ವದ ಸಂಶೋಧನೆಗೆ ಜೈನ ಕಲೆಯ ರಕ್ಷಣಾ ವೇದಿಕೆಯು ಪುರಸ್ಕಾರ ನಿಡಿ ಡಾ॥ ಪೂಜಾಗೆ ಸನ್ಮಾನ ಮಾಡಿದಾಗ ಬಂಗಾರದ ಮುಸುಕಿನ ಜೋಳದ ತೆನೆಯನ್ನು ನೆನಪು ಕಾಣಿಕೆಯಾಗಿ ನೀಡುತ್ತದೆ. ಪೂಜಾ ಅದನ್ನು ಪರಿಶೀಲಿಸಿದಾಗ ಅದು ಬಂಗಾರದ ನಿಧಿಗಳನ್ನು ಇನ್ನೂ ಬಸದಿಗಳಿಂದ ತೆಗೆದಿಲ್ಲವೇ ? ತನ್ನನ್ನು ನಂಬಿಸಲೆಂದು ಹಾಗೆ ತೋರಿಸಿದರೇ ? ನಂಬಿಸಿ ತನ್ನಿಂದ ಪುಸ್ತಕ ಬರೆಸಿ ಬಸದಿಗಳನ್ನು ಸಂರಕ್ಷಿಸಲು ಹಾಗೆ ಮಾಡಿದರೇ ? ಎಲ್ಲವೂ ಮುಸುಕಿನಲ್ಲೇ ಉಳಿಯುತ್ತದೆ.

ಕತೆಯನ್ನು ಹೀಗೆ ಸರಳವಾಗಿ ಹೇಳಿದ ಮೇಲೆ ಕಾದಂಬರಿಯ ಬಗ್ಗೆ ಹೇಳುವಂಥ ಹಲವು ವಿಷಯಗಳಿಗೆ ಬರಬಹುದು. ಕುತೂಹಲವನ್ನು ಕೆರಳಿಸುತ್ತಲೇ ಕತೆ ಹೇಳುತ್ತ ಹೋಗುವ ಕಲೆ ಕಾದಂಬರಿಕಾರರಿಗೆ ಕರಗತವಾಗಿದೆ.

ಅನೇಕ ಹೊಸ ಐತಿಹಾಸಿಕ ಸಂಗತಿಗಳು ಈ ಕಾದಂಬರಿಯಲ್ಲಿ ಅಡಕವಾಗಿರುವುದು ಈ ಕೃತಿಯ ಒಂದು ವಿಶೇಷ :

''ಸ್ಪೇನ್ ದೇಶದ ಸಮುದ್ರಯಾನಿಗಳು ದಕ್ಷಿಣ ಅಮೇರಿಕಾಗೆ ಬಂದಾಗ ಅಲ್ಲಿಯ ಜನ 'ಪಟೋಲಿ' ಎಂಬ ಹೆಸರಿನಲ್ಲಿ ಇದೇ ರೀತಿಯ ಆಟ ಆಡುತ್ತಿದ್ದರು. ಈ ಆಟವನ್ನು ಅಲ್ಲಿಯೂ ಕ್ರಿಸ್ತ ಪೂರ್ವದಿಂದ ಆಡುತ್ತಿದ್ದರೆಂಬುದಕ್ಕೆ ಪುರಾವೆಗಳಿವೆ. ಕ್ಲಿಷ್ಟ ನಿಯಮಗಳಿಂದ ಕೂಡಿದ ಇಂಥ ಆಟವು ಭೂಭಾಗದ ಎರಡು ಕಡೆಯಲ್ಲಿ ಸ್ವತಂತ್ರವಾಗಿ, ಒಂದಕ್ಕೊಂದು ತಿಳಿಯದೆ ರೂಪುಗೊಳ್ಳುವ ಸಾಧ್ಯತೆ ಕೋಟಿಯಲ್ಲಿ ಒಂದು ಎಂದು ಸಂಖ್ಯಾ ಶಾಸ್ತ್ರಜ್ಞರು ತೋರಿಸಿದ್ದಾರೆ. ಆದ್ದರಿಂದ ಈ ಆಟವು ಭಾರತದಲ್ಲಿ ಹುಟ್ಟಿ ಬೆಳೆದು ಕೊಲಂಬಸ್‌ಗೂ ಮುಂಚೆ ಪ್ರಯಾಣಿಸಿರಬಹುದಾದ ಸಮುದ್ರಯಾನಿಗಳ ಮೂಲಕ ದಕ್ಷಿಣ ಅಮೇರಿಕಾ ತಲುಪಿರಬಹುದು ಎಂದು ವಾದಿಸಲಾಗಿದೆ. ಹಾಗಾಗಿ ಕೊಲಂಬಸ್‌ಗೂ ಮುನ್ನ ಅಮೇರಿಕಾ ಮತ್ತು ಭಾರತದ ನಡುವೆ ಸಾಗರ ಸಂಪರ್ಕ ಇತ್ತು ಎಂದರ್ಥ.'' (ಪುಟ ೩೮-೩೯)

ವಿಷ್ಣುವರ್ಧನನ ಇಬ್ಬರು ರಾಣಿಯರ ಬಗ್ಗೆ ಹೇಳುತ್ತಾ ''ವಿಷ್ಣುವರ್ಧನನು ಧರ್ಮಾಂತರಗೊಂಡಮೇಲೆ ಹಲವಾರು ತುಮುಲಗಳು ಕಾಡಿರಬಹುದು. ಲಕ್ಷ್ಮಿ ಹಾಗೂ ಶಾಂತಲೆಯರ ಮಧ್ಯೆ ವೈಷಮ್ಯ ಬಂದಿರಲು ಸಾಧ್ಯ. ಶ್ರವಣಬೆಳಗೊಳದಲ್ಲಿ ಕ್ರಿ.ಶ. ೧೧೩೧ರಲ್ಲಿ ಕೆತ್ತಿದ ಶಾಂತಲೆ ಮತ್ತು ಮಾಚಿಕಬ್ಬೆಯ ಶಾಸನದಲ್ಲಿ ಶಾಂತಲೆಯನ್ನು 'ಮದಿಸಿದ ಸವತಿಯರ ಪಾಲಿಗೆ ಮದಗಜವು' ಎಂದು ಬಣ್ಣಿಸಲಾಗಿದೆ. ಈ ಶಾಸನವನ್ನು ಕ್ರಿ.ಶ. ೧೧೩೧ರಲ್ಲಿ ಎಂದರೆ ಶಾಂತಲೆ ಸತ್ತಾಗ ಕೆತ್ತಲಾಯತು. ಈ ವಿವರ ಶಾಸನದಲ್ಲಿ ಬರಬೇಕಾದರೆ ಆಕೆ ಮತ್ತು ಸವತಿಯರ ಮಧ್ಯೆ ಇದ್ದ ಅಂತರ್ ಕಲಹವನ್ನು ಊಹಿಸಬಹುದು. ಅಷ್ಟೇ ಅಲ್ಲದೆ, ಆಕೆ ಇರುವಾಗಲೇ ಕಟ್ಟಿಸಿರುವ ಒಂದು ಬಸದಿಗೆ

'ಸವತಿ ಗಂಧಾವರಣ ಬಸದಿ' (ಸವತಿಯರಲ್ಲೆಲ್ಲಾ ಉತ್ತಮವಾದವಳ ಬಸದಿ) ಎಂದು ಹೆಸರಿಡಲಾಗಿದೆ. ಮತ್ತೊಂದು ವಿವರ : ಕ್ರಿ.ಶ. ೧೧೩೧ರಲ್ಲಿ ಕೆತ್ತಲಾದ ಶಾಂತಲೆಯ ದತ್ತಿ ಶಾಸನದಲ್ಲಿ 'ಉದ್ಧಟ ಸವತಿಯರ ಪಾಲಿಗೆ ಮದಗಜವೂ' ಎಂದು ಹೇಳಲಾಗಿದೆ. ಈ ಶಾಸನವನ್ನು ಶಾಂತಲೆ ಬದುಕಿರುವಾಗಲೇ ಕೆತ್ತಿದ್ದು ಆಕೆಯ ಮತ್ತು ಸವತಿಯರ ಮಧ್ಯೆ ಇದ್ದ ಸಂಬಂಧಕ್ಕೆ ಕನ್ನಡಿಯಾಗಿ ನಿಲ್ಲುತ್ತದೆ. ಇತಿಹಾಸದ ಈ ಸತ್ಯಗಳು ಭಾವುಕತೆ ಹೊಮ್ಮಿಸುವ ಕಾದಂಬರಿಕಾರರ ಕಾಲ್ಪನಿಕ ಕಥೆಗಳಾಗಿ ಮರೆಯಾಗಿ ಹೋಗಿವೆ. (ಪುಟ ೧೫೭-೫೮)

ಕತೆಯ ಪ್ರಮುಖ ಭಾಗ ಕೇವಲ ಹನ್ನೊಂದು ದಿನಗಳಲ್ಲಿ ನಡೆದ ಘಟನೆಗಳು. ಇದಕ್ಕೆ ಹನ್ನೆರಡು ವರ್ಷ ಮುಂಚೆ ನಡೆದ ಘಟನೆ (ಬ್ಯಾಂಕಾಕ್‌ನ ಹೋಟೆಲಲ್ಲಿ ದಂಪತಿಗಳ ಕೊಲೆ) ಹಾಗು ಇದರ ನಂತರ ಆರು ತಿಂಗಳಲ್ಲಿ ನಡೆದ ಘಟನೆ (ಡಾ॥ಪೂಜಾ ಮತ್ತು ರಾವ್ ಬರೆದ 'ಕನಕ ಮುಸುಕು' ವಿಶ್ವದ ಚರಿತ್ರಕಾರರ ಗಮನಸೆಳೆದು ಅವರಿಗೆ ಪುರಸ್ಕಾರ ನೀಡಿ ಮುಸುಕಿನ ತೆನೆಯನ್ನು ನೆನಪಿನ ಕಾಣಿಕೆಯಾಗಿ ನೀಡಿದ್ದು) ಪುಸ್ತಕವೊಂದರ ರಕ್ಷಾಪುಟಗಳಂತೆ ಬಂದಿವೆ ಎನ್ನಬೇಕು.

ಅರವತ್ತೊಂದು ಕಿರು ಅಧ್ಯಾಯಗಳಲ್ಲಿ ಚಿತ್ರಿತವಾಗಿರುವ ಈ ಕತೆಯಲ್ಲಿ ಪ್ರತಿ ಅಧ್ಯಾಯಕ್ಕೂ ಆರಂಭದಲ್ಲಿ ದೇಶ, ಕಾಲಗಳನ್ನು ನಮೂದಿಸಲಾಗಿದೆ. (ಉದಾ : ಮೂವತ್ತನೇ ಅಧ್ಯಾಯ - ಮುಂಬೈ, ನವೆಂಬರ್ ೧೩, ಮಧ್ಯಾಹ್ನ ೧೧-೦೦ ಗಂಟೆ; ಐವತ್ತೇಳನೇ ಅಧ್ಯಾಯ - ಸೋಮನಾಥಪುರ ಬಸದಿಯ ಗರ್ಭಗುಡಿ, ನವೆಂಬರ್ ೧೬, ೧೧-೦೦ ಗಂಟೆ). ಮೇಲು ನೋಟಕ್ಕೆ ಇದರ ವಿಶೇಷತೆ ಅರಿವಾಗದಿರಬಹುದು. ಆದರೆ ಇಡೀ ಕಾದಂಬರಿಯ ಘಟನೆಗಳನ್ನು ಕಾಲ ದೇಶಗಳ ಚೌಕಟ್ಟಿನಲ್ಲಿ ಅಡಗಿಸುವ ಕೌಶಲ ಸಾಮಾನ್ಯದ್ದಲ್ಲವೆಂಬುದು ಸ್ವಲ್ಪ ಆಲೋಚಿಸಿದರೂ ತಿಳಿದುಬಿಡುತ್ತದೆ.

ಅಲ್ಲಲ್ಲಿ ಸೇರಿಸಲಾಗಿರುವ ನಕ್ಷೆಗಳು, ಶಾಸನ ಹಾಗೂ ಚಿತ್ರಗಳು ಕೃತಿಯ ಮೌಲ್ಯವನ್ನು ಹೆಚ್ಚಿಸಿವೆ. ಬೇಲೂರು, ಹಳೇಬೀಡು, ಶ್ರವಣಬೆಳಗೊಳ, ಬಸರಾಳು (ಮಂಡ್ಯ ಜಿಲ್ಲೆ) ಹಾಗೂ ಕಂಬದಹಳ್ಳಿಯ ದೇವಾಲಯ/ಕೆತ್ತನೆಗಳ ಫೋಟೋಗಳು ಶಿಲ್ಪ ಸೌಂದರ್ಯದತ್ತ ಗಮನ ಸೆಳೆಯುತ್ತಲೇ ಕತೆಯ ವಿವರಗಳನ್ನು ಕಣ್ಣಿಗೆ ಕಟ್ಟುತ್ತವೆ. ವಾಸ್ತವವೂ ಕಲ್ಪನೆಯೂ ಬೆರೆತ ಕತೆಯಾದರೂ ವಾಸ್ತವವಾಗಿ ನಡೆದದ್ದೇ ಎಂದು ಓದುಗ ನಂಬುವಂತೆ ಮಾಡಲು ಈ ತಂತ್ರಗಳು ಯಶಸ್ವಿಯಾಗಿ ಬಳಕೆಯಾಗಿವೆ.

ಚರ್ಚಿತವಾಗಿರುವ ಅನೇಕ ಸಂಗತಿಗಳಿಗೆ ಗ್ರಾಂಥಿಕ ಆಧಾರಗಳನ್ನು ಸೂಚಿಸಿರುವುದು ಕೃತಿಯ ಅಥೆಂಟಿಸಿಟಿಯನ್ನು ಹೆಚ್ಚಿಸಿವೆ. ಉದಾ : ಶ್ರವಣಬೆಳಗೊಳ ಸ್ಥಳನಾಮದ ವ್ಯುತ್ಪತ್ತಿಯ ಬಗ್ಗೆ ಹೇಳುತ್ತಾ 'ವೆಳ್ ಎಂದರೆ ದ್ರಾವಿಡ ಭಾಷೆಯಲ್ಲಿ ನೀರು ಎಂದು. ಹೀಗಾಗಿ ನೀರಿನ ಕೊಳ ಅಥವಾ ವೆಳ್ ಕೊಳ ಕಾಲಾಂತರದಲ್ಲಿ ಬೆಳ್ಗೊಳವಾಗಿದೆ ಎಂದು ಹೇಳುತ್ತಾರೆ''. ಎಂದು ಹೇಳಿ ಅಡಿ ಟಿಪ್ಪಣಿಯಲ್ಲಿ - ದೇವರಕೊಂಡಾರೆಡ್ಡಿ, ೧೯೯೩. ಶ್ರವಣಬೆಳಗೊಳದ ಬಸದಿಗಳ ವಾಸ್ತುಶಿಲ್ಪ, ಚಂದ್ರಗುಪ್ತ ಗ್ರಂಥಮಾಲೆ, ಜೈನ ಮಠ, ಶ್ರವಣಬೆಳಗೊಳ ೫೭೩-೧೩೫ ಎಂಬ ವಿವರಗಳನ್ನು ನೀಡಲಾಗಿದೆ.

ಬೆಳ್ಗೊಳ 'ಶ್ರವಣ ಬೆಳ್ಗೊಳ' ಆದದ್ದು ಹೇಗೆ ? ಚಾವುಂಡರಾಯನ ನಂತರ ಅದು ಶ್ರವಣವಾಗಿದೆ. (ಮುಂಚೆ 'ಕಳ್ವಪ್ಪು' ಎನ್ನುತ್ತಿದ್ದರಂತೆ). ಅದಕ್ಕೂ ಹಿಂದೆ ಸಾವಿರಾರು ವರ್ಷಗಳಿಂದ ಅಲ್ಲಿಗೆ ಮುನಿಗಳು ಬಂದು ಹೋಗುತ್ತಿದ್ದರು. ಆದರೂ ಇದನ್ನು ಶ್ರವಣ ಎಂದು ಕರೆದಿರಲಿಲ್ಲ, ಹಾಗಾಗಿರಬೇಕಾದರೆ, ಚಾವುಂಡರಾಯನ ಕಾಲದ ನಂತರ ಇದು ಶ್ರವಣ ಏಕಾಯಿತು ? ಕಾರಣ - ಚಾವುಂಡರಾಯನ ಕಾಲದಲ್ಲಿ ಇದು ಜೈನ ಸಿರಿಯನ್ನು ಇಟ್ಟಿದ್ದ ವನವೆಂದು ಗುರುತಿಸಲಾಯಿತು. ಹಾಗಾಗಿ ಅದು ಸಿರಿವನ - ಶ್ರವಣವಾಯಿತು.

''ಸಿರಿವನ ವೆಳ್ ಕೊಳ

ಸಿರಿವಣ ಬೆಳ್ ಕೊಳ

ಸ್ರಿವಣ ಬೆಳ್ ಕೊಳ
ಶ್ರಿವಣ ಬೆಳಗೊಳ
ಶ್ರವಣ ಬೆಳಗೊಳ" – ಎಂಬುದು ವ್ಯುತ್ಪತ್ತಿ

ಸಿರಿವನವೆಂದು ಕಂಡುಕೊಂಡದ್ದು ಚಾವುಂಡರಾಯನೇ. ಶಿಥಿಲವಾಗಿ ಬಿದ್ದಿದ್ದ ಹಳೆಯ ಬಸದಿಗಳನ್ನು ಕೆಡವಿ ಹೊಸದಾಗಿ ಜೀರ್ಣೋದ್ದಾರ ಮಾಡಿರುವ ಬಸದಿಗಳು. ಈ ಜೀರ್ಣೋದ್ಧಾರದ ಕೆಲಸವನ್ನು ಚಾವುಂಡರಾಯನ ಕಾಲದಲ್ಲಿ ಅತಿ ಆಸಕ್ತಿಯಿಂದ ಮಾಡಲಾಯಿತು. ೧೦೦೦ ವರ್ಷಗಳಿಗೂ ಹಿಂದಿನ ಚಂದ್ರಗುಪ್ತನ ಕಾಲದ ಹಳೆಯದಾದ ಬಸದಿಗಳನ್ನು ಕೆಡವುವಾಗ ನಿಸ್ಸಂದೇಹವಾಗಿ ಕಾಲಗರ್ಭದಲ್ಲಿ ಹೊತುಹೋಗಿದ್ದ ನಿಧಿಯನ್ನು ಆತ ಕಂಡಿರಬೇಕು.

– ಈಗ ಭಾಗ ಕಲ್ಪನೆಯೆನ್ನಿಸಿದರೂ, ಈ ಕಲ್ಪನೆಗೆ ನೀಡಿರುವ ತಾರ್ಕಿಕತೆಯ ಅಡಿಪಾಯ ಸಾಕಷ್ಟು ಗಟ್ಟಿಯಾದದ್ದು. ಇಷ್ಟು ಸಾಲದೆಂಬಂತೆ,

"Temples were carefully built many times more or less on the original pattern and damaged sculptures were replaced by the new ones. Copies of illuminated manuscripts were distributed to distinct temples and monasteries which were provided with underground bunkers and secret vaults".

**- Encyclopedia of World Art VIII,**
**Mc Graw Hill Book Com. Inc., Newyork**

ಎಂಬ ಅಡಿಟಿಪ್ಪಣಿಯ ಉಲ್ಲೇಖವೂ ಇದೆ. ಕಾದಂಬರಿಕಾರರ ವೈಜ್ಞಾನಿಕ ಹಿನ್ನೆಲೆ ಬರವಣಿಗೆಗೆ ಈ ರೀತಿಯ ಖಚಿತತೆ ನೀಡಿರಬಹುದು.

ಅಂದಹಾಗೆ, (ಶ್ರೀ ಎಸ್.ಎಲ್. ಭೈರಪ್ಪನವರ 'ಆವರಣ'ದಲ್ಲೂ ಇಂಥ ಟಿಪ್ಪಣಿಗಳನ್ನು ನೋಡಬಹುದು. ಎರಡೂ ಕಾದಂಬರಿಗಳ ನಾಯಕಿಯರು ಸಂಶೋಧಕಿಯರು. ಎರಡೂ ಜನಪ್ರಿಯತೆ ಗಳಿಸಿವೆ. ಇವರೆಡರಲ್ಲೂ ವಾಸ್ತವ ಹಾಗೂ ಕಲ್ಪನೆಗಳು ಮಿಳಿತವಾಗಿವೆ. ಆದರೆ ಈ ಎರಡು ಕಾದಂಬರಿಗಳ ಹೋಲಿಕೆ ಇಲ್ಲಿಗೆ ಮುಕ್ತಾಯವಾಗುತ್ತದೆ. ಕಾದಂಬರಿಯ ಉದ್ದೇಶ ಹಾಗೂ ಒಟ್ಟಾರೆ ಪರಿಣಾಮಗಳಲ್ಲಿ ಅಜಗಜಾಂತರವಿರುವುದನ್ನು ಯಾರೂ ಗಮನಿಸಬಹುದು.)

ಕಲ್ಪನೆ, ವಾಸ್ತವ, ಇತಿಹಾಸ, ಪುರಾತತ್ತ್ವ ವಿಜ್ಞಾನ, ಹಾಗೂ ತಂತ್ರಜ್ಞಾನಗಳು ಕೃತಿಯಲ್ಲಿ ಮಧುರವಾಗಿ ಮೇಳೈಸಿವೆ. ಸಿರಿಭೂವಲಯದ ಪರಿಕಲ್ಪನೆ ಕನ್ನಡದ ಓದುಗರಲ್ಲಿ ಕುತೂಹಲವನ್ನುಂಟುಮಾಡಿದೆಯಷ್ಟೆ? ಒಗಟಾಗಿಯೇ ಉಳಿದಿರುವ ಈ ಪರಿಕಲ್ಪನೆಯನ್ನು ಇಲ್ಲಿ ಅತ್ಯಂತ ಸಹಜವಾಗಿಯೇ ಕತೆಯಲ್ಲಿ ಸೇರಿಸಲಾಗಿದೆ.

'ಸಿರಿಭೂವಲಯ' ಎಂಬುದನ್ನು ಹಿಂದುಮುಂದಾಗಿ ಓದಿದರೆ 'ಯಲವಭೂರಿಸಿ' ಎಂದಾಗುತ್ತದೆ. 'ಯಲವ' ಪ್ರದೇಶದ ಒಬ್ಬ ಜೈನ ಋಷಿಯು ಇದನ್ನು ಬರೆಸಿದನಂತೆ. ನಂದಿಬೆಟ್ಟದ ಬಳಿ ಯಲವ ಎಂಬ ಊರು ಈಗಲೂ ಇದೆ. 'ಸಿರಿಭೂವಲಯ' ಬರೆದ ಕವಿ ಕುಮುದೇಂದು ಎಂಬುವವನು ಈ ಯಲವವೆಂಬ ಊರಿನಲ್ಲಿ ಇದ್ದನೆಂದು ನಂಬಿಕೆ. ಮೊದಲ ಮುದ್ರಣ ೧೯೪೦-೫೦ರಲ್ಲಿ ಪ್ರಕಟವಾದರೂ ಅದರ ಎಂಟು ಅಧ್ಯಾಯಗಳ ಮೊದಲ ಭಾಗವನ್ನು ಇತ್ತೀಚೆಗೆ ಮತ್ತೆ ಪ್ರಕಟಿಸಲಾಗಿದೆ. ಅದರ ಮುಖಪುಟದಲ್ಲಿರುವ ಮಾಹಿತಿಯಂತೆ 'ಕುಮುದೇಂದು' ಎಂಬ ಜೈನ ಮುನಿ ಇದರ ರಚಕ. ಕ್ರಿ.ಶ. ೮೦೦-೧೦೦೦ ಈತನ ಕಾಲ; ಎಂದರೆ ಚಾವುಂಡರಾಯನ ಕಾಲದ ಕೃತಿ. ಸಿರಿಭೂವಲಯದಲ್ಲಿ 'ಕಳ್ವಪ್ಪು' ಎಂಬ ಪದ ಬಂದಿದ್ದು ಅದು ಬೆಳಗೊಳದ ಆಗಿನ ರೂಢಿಯ ಹೆಸರಾಗಿತ್ತು. ಈ ಕೃತಿಯ ವಿಷಯಗಳನ್ನು ಆದಿ ತೀರ್ಥಂಕರ ವೃಷಭದೇವನು ತನ್ನ ಹೆಣ್ಣು ಮಕ್ಕಳ ಕಿವಿಯಲ್ಲಿ ಬೋಧಿಸಿದ ರಹಸ್ಯ ಸೂತ್ರಗಳು ಎನ್ನಲಾಗಿದೆ. ಇಲ್ಲಿ ಕನ್ನಡ ಅಂಕಿಗಳಿಗೆ ಸಂಬಂಧಿಸಿದ ಒಂದು

ಸ್ವಾರಸ್ಯವಿದೆ. ವೃಷಭದೇವನು ಒಬ್ಬ ಹೆಣ್ಣುಮಗಳಿಗೆ ಶೂನ್ಯದಿಂದ ಒಂಬತ್ತು ಅಂಕಿಗಳನ್ನು ಹೇಗೆ ಸೃಷ್ಟಿಸಬಹುದು ಎಂಬ ವಿಧಾನವನ್ನು ಆಕೆಯ ಅಂಗೈ ಮೇಲೆ ಬರೆದು ಹೇಳಿದನಂತೆ. ಅದನ್ನು ಹೀಗೆ ತೋರಿಸಬಹುದು;

ಗ ತ ನ ಳ ಶ ಮ ಯ ಐ ರ ೦

೧ ೨ ೩ ೪ ೫ ೬ ೭ ೮ ೯ ೦

(ಕನ್ನಡ ವರ್ಣಮಾಲೆಯ ಗ, ತ, ನ, ಳ, ಶ, ಮ, ಯ, ಐ ಮತ್ತು ರ (ಅರ್ಕಾವೊತ್ತು)ಗಳ ಒತ್ತುಗಳೇ ೧ ರಿಂದ ೯ ಎಂಬ ಕನ್ನಡ ಅಂಕಿಗಳಾಗಿ ರೂಪುಗೊಂಡಿವೆ ಎಂಬ ಇನ್ನೊಂದು ವಾದವೂ ಇದೆ. ಮೇಲೆ ಕಾಣಿಸಿರುವ ಅಂಕಿಗಳನ್ನು ಮತ್ತೊಮ್ಮೆ ಗಮನಿಸಿ ನೋಡಬಹುದು.)

ಅಲ್ಲದೆ, ಸಂಖ್ಯೆಗಳನ್ನು ಬಳಸಿ ಪ್ರಾಕೃತ ಹಾಗೂ ಇತರ ಭಾರತೀಯ ಭಾಷೆಗಳನ್ನು ಬರೆಯಬಹುದೆಂದೂ ವೃಷಭದೇವನು ತೋರಿಸಿದನಂತೆ. ೬೪ ಅಂಕಿ ಅಕ್ಷರಗಳ ಸಮಾನಾಂತರ ಚಕ್ರವನ್ನೂ ಸಿರಿಭೂವಲಯದ ಮುಖಪುಟದಲ್ಲಿ ತೋರಿಸಲಾಗಿದೆ.

ಉದಾ : ೧ = ಅ, ೨ = ಆ, ೩ = ಇ, ೪ = ಈ , ೫ = ಉ ಇತ್ಯಾದಿ (ಪುಟ ೧೫೧)

ಸಂಖ್ಯಾ ಸೂತ್ರಗಳಿಗೆ ಅಂಕಾಕ್ಷರ ಸೂತ್ರವನ್ನು ಹೊಂದಿಸಿ ಓದಿ ಹಲವು ರಹಸ್ಯ ಜ್ಞಾನವನ್ನು ಪಡೆಯಬಹುದೆಂಬ ನಂಬಿಕೆ ಇದೆ. ಉದಾ : 'ಕಲ್ಪವೃಕ್ಷ' ಎಂದು ಬರೆಯಲು ಈ ಅಂಕಿಗಳನ್ನು ಬರೆಯಲಾಗುತ್ತದೆ;

28 1 55 48 1 56 10 1 28 58 1

ಈ ಅಂಕಿಗಳನ್ನು ಅಕ್ಷರ ರೂಪಕ್ಕೆ ತಂದರೆ –

ಕ್ ಅ ಲ್ ಪ್ ಅ ವ್ ರ್ ಅ ಕ್ ಷ್ ಅ

ಎಂಬ ಅಕ್ಷರಗಳು ಬರುತ್ತವೆ. ಅವನ್ನು ಸೇರಿಸಿ ಓದಿದರೆ 'ಕಲ್ಪವೃಕ್ಷ' ಎಂದಾಗುತ್ತದೆ.

(ಆದರೆ ಯಾವಾಗಲೂ ಇದು ಇಷ್ಟು ಸುಲಭವಾಗಿರುವುದಿಲ್ಲ. ಎಲ್ಲಿಂದ ಪ್ರಾರಂಭಿಸಬೇಕು ? ಯಾವ ದಿಕ್ಕಿನಲ್ಲಿ ಓದಬೇಕು ಎಂಬುದೂ ರಹಸ್ಯವೇ ! ಆದ್ದರಿಂದ ಇದು ಶ್ರಮದಾಯಕವೂ ಕೂಡ). ಕಾದಂಬರಿಯಲ್ಲಿ ಈ ಅಂಶವನ್ನು ಸ್ವಾರಸ್ಯಕರವಾಗಿ ಬಳಸಲಾಗಿದೆ. 'ಮಂಲಿತಂಮ'ನೆಂಬ ಶಿಲ್ಪಿಯು ಕೆತ್ತಿದ ಅಂಕಿಗಳಿಂದ.

ಗುಟ್ಟು ಅಡಗಲಿ ಅಡಿಗಳಲ್ಲಿ
ಬಿಟ್ಟು ಹೋಗಿಹ ಕಲ್ಲಿನಲ್ಲಿ
ಬಿಟ್ಟಿದೇವಗೆ ದೇವಾಲಯವಾಗಲಿ – **ಮಂಲಿತಂಮ**

ಇವೇ ಮುಂತಾದ ಸಾಲುಗಳು ದೊರೆಯುತ್ತವೆ. ಇವುಗಳನ್ನೇ ಆಧರಿಸಿ ನಿಧಿ ಇರುವ ಜಾಗವನ್ನು ಪತ್ತೆ ಹಚ್ಚುವ ಜಾಣತನ ಓದುಗರನ್ನು ತಲೆದೂಗಿಸುತ್ತದೆ. ಹೀಗೆ ಕಥೆಯ ಹಂದರದಲ್ಲಿ ಅನೇಕ ಕುತೂಹಲಕಾರಿ ಸಂಗತಿಗಳನ್ನು ಹಬ್ಬಿಸುವುದರಿಂದ ಕಾದಂಬರಿಗೆ ಹೊಸ ಆಯಾಮ ಮೂಡಿರುವುದು ಆಶ್ಚರ್ಯವಲ್ಲ.

ಅನೇಕ ಉತ್ತಮಾಂಶಗಳಿಂದ ಕೂಡಿರುವ ಈ ಕೃತಿಯಲ್ಲಿ ಕೊರತೆಗಳೇ ಇಲ್ಲವೆಂದಲ್ಲ. ಕಾದಂಬರಿಯ ಕೊನೆಯಲ್ಲಿ 'ಕನಕ ಮುಸುಕು' ತೆರೆದು ತೋರಿಸುವ ಸತ್ಯಾಂಶವಾದರೂ ಏನು ? ಎಂಬುದು ಅಡ್ಡಗೋಡೆಯ ಮೇಲೆ ದೀಪವಿಟ್ಟಂತಾಗಿದೆ. ಬಹುಶಃ ಕೃತಿಯ ಶೀರ್ಷಿಕೆ ಅನ್ವರ್ಥವಾಗಿದೆ ಎಂಬುದೇ ಸಮಾಧಾನದ ಅಂಶವಿದ್ದೀತು ! ವ್ಯೂಹ ರಚಿಸುವ ಬಿಪಿ ಕೊನೆಯವರೆಗೂ ಆಗಾಗ್ಗೆ ಖಳನಾಯಕನಂತೆ ತೋರುವುದಿರಲಿ, ಇದ್ದಕ್ಕಿದ್ದ ಹಾಗೆ ಭೂಗತ ಕಳ್ಳರ ಗುಂಪನ್ನು ಸಿ.ಬಿ.ಐ. ದಸ್ತಗಿರಿ ಮಾಡುವುದು ತೀರ ಸಿನಿಮೀಯವೆನ್ನದೆ ವಿಧಿಯಿಲ್ಲ. ಬಿಳಿಗಿರಿಯ ಬಸದಿಯಲ್ಲಿ ಕೇಶವಭಟ್ಟನೆಂಬ ಬ್ರಾಹ್ಮಣನು ಮೂರ್ತಿಯ ಪೀಠದಡಿಯ ನಿಧಿಯ ಆಸೆಯಿಂದ ಹದಿನಾರು

ಜೈನ ಮುನಿಗಳನ್ನು ಕೊಲೆಮಾಡುವುದೇ ಅಲ್ಲದೆ ಕೊನೆಗೆ ನಿತ್ರಾಣನಾಗಿ ತಾನೂ ಸಾಯುವ ಸನ್ನಿವೇಶವನ್ನು ಅರಗಿಸಿಕೊಳ್ಳುವುದು ಸ್ವಲ್ಪ ಕಷ್ಟವಾದೀತು. ಇದಕ್ಕೂ ಶಾಸನದ ಆಧಾರ ನೀಡುವುದನ್ನು ಲೇಖಕರು ಮರೆತಿಲ್ಲ. ಇಂಥ ಇನ್ನು ಕೆಲವು ನಣ್ಣ ಪುಟ್ಟ ಅರೆಕೊರೆಗಳನ್ನು ಅಲ್ಲಲ್ಲಿ ಕಾಣಲು ಸಾಧ್ಯವಾದೀತು. ಇನ್ನು ಪ್ರಕಾಶನದ ದೃಷ್ಟಿಯಿಂದ ನೋಡುವುದಾದರೆ ಈ ರೀತಿಯ ಮೌಲಿಕ ಕೃತಿಗೆ ಮಾಡಿರುವ ಪೇಪರ್ ಬ್ಯಾಕ್ ಬೈಂಡಿಂಗ್ ತೀರ ಕಳಪೆ ದರ್ಜೆಯದಾಗಿದ್ದು ಒಂದೇ ಓದಿಗೆ ಇಡೀ ಪುಸ್ತಕ ಹಲವು ಖಂಡಗಳಾಗುವ ಸಾಧ್ಯತೆಗಳಿವೆ. ಇವೇನೇ ಇರಲಿ, ಒಟ್ಟಾರೆ ಇದೊಂದು ವಿಧದ ಆಯಾಮಗಳಿಂದ ಕೂಡಿದ ವಿನೂತನವೂ ರೋಚಕವೂ ಆದ ಕೃತಿಯನ್ನಲು ಅನೇಕ ಕಾರಣಗಳಿವೆ.

ಸಂವಹನದಲ್ಲಿ ಆಧುನಿಕ ಪರಿಕರಗಳ ಬಳಕೆ ಈ ಯುಗದ ಒಂದು ವಿಶೇಷವಷ್ಟೇ ? ಈ ವಿಶೇಷತೆಯನ್ನು ಯಶಸ್ವಿಯಾಗಿ ಇಲ್ಲಿ ಚಿತ್ರಿಸಲಾಗಿದೆ. ಇದು ಕನ್ನಡಕ್ಕೆ ತೀರಾ ಹೊಸತು. ಡಾ॥ ಪೂಜಾ ಮತ್ತು ಡಾ॥ ರಾವ್ ಚಾಟ್ ಮೇಲ್‌ಗಳ ಮೂಲಕ ಸಂವಹನ ನಡೆಸುವುದು, ಅಂತರಜಾಲದಲ್ಲಿ ವಿವಿಧ ತಾಣಗಳಿಗೆ ಹೋಗಿ ಮಾಹಿತಿ ಸಂಗ್ರಹಿಸುವುದು, ಸಂಗ್ರಹಿಸಿದ ಮಾಹಿತಿಯನ್ನು ನಕ್ಷೆಗೆ ಪರಿವರ್ತಿಸುವುದು, ಸ್ಕ್ಯಾನ್ ಮಾಡುವುದು, ಮಾಹಿತಿಯನ್ನು ಥಂಬ್‌ಡ್ರೈವ್‌ನಲ್ಲಿ ಶೇಖರಿಸುವುದು, ಟೆಲಿ ಕಾನ್ಫರೆನ್ಸಿಂಗ್, ಎಲ್.ಸಿ.ಡಿ. ಪ್ರೊಜೆಕ್ಟರಿನ ಮೂಲಕ ಚಿತ್ರಗಳನ್ನು ಪರದೆಯ ಮೇಲೆ ಮೂಡಿಸುವುದು, ಪವರ್ ಪಾಯಿಂಟ್ ಪ್ರೆಸೆಂಟೇಷನ್ನುಗಳು ತೀರಾ ಸಹಜವಾಗಿ ಚಿತ್ರಿತವಾಗಿವೆ. ತಂತ್ರಜ್ಞಾನದ ನೆರವಿನಿಂದ (ಶಬ್ದರೂಪದ) ಮಾತುಗಳು ತೆರೆಯಮೇಲೆ ಪ್ರಾಕೃತ ಭಾಷೆಗೆ ತರ್ಜುಮೆಯಾಗಿ ತೋರುವ ಬೆರಗೂ ಇಲ್ಲಿದೆ. ಕನ್ನಡ ನಾಡಿದ ರಾಜಧಾನಿ ಬೆಂಗಳೂರು ಸಿಲಿಕಾನ್ ಸಿಟಿ ಎನಿಸಿದ್ದು ಸಾರ್ಥಕವಾಯಿತೆನಿಸುವ ಮಟ್ಟಿಗೆ ಕಾದಂಬರಿಯಲ್ಲಿ ಈ ಅಂಶಗಳ ಚಿತ್ರಣವಿದೆ.

ಬೆನ್ನುಡಿಯಲ್ಲಿ ಶ್ರೀ ನಾಗೇಶ ಹೆಗಡೆಯು ಹೇಳಿರುವುದನ್ನೂ ಇಲ್ಲಿ ಗಮನಿಸಬಹುದು. ''ಸೆಟಲೈಟ್ ಚಾನೆಲ್, ಸೆಲ್ ಫೋನ್, ಈ ಮೇಲ್, ನೆಟ್ ಚಾಟ್‌ಗಳ ಈ ಯುಗದಲ್ಲಿ ಕಾದಂಬರಿಯ ನಾಯಕಿಯೂ ಅಂಥದ್ದೇ ಹೈಟೆಕ್ ಸಂಪರ್ಕ ಸಾಧನಗಳನ್ನು ಬಳಸಿ ಗ್ಲೋಬ್ ಟ್ರಾಟ್ ಮಾಡುತ್ತ ಭೂತ ಭವಿಷ್ಯಗಳನ್ನು ಬೆಸೆಯುವ ಹರಿಕಾರ್ತಿಯಾಗಿರುವುದು ಹೊಸ ಕನ್ನಡ ಪೀಳಿಗೆಗೂ ಆಕರ್ಷವೆನಿಸುತ್ತದೆ''.

ಹೀಗೆ ಕಾರ್ಯನಿರತ ವಿಜ್ಞಾನಿ ಡಾ॥ ಕೆ.ಎನ್. ಗಣೇಶಯ್ಯನವರ ಈ ಕೃತಿಯಲ್ಲಿ ಅನೇಕ ವೈಜ್ಞಾನಿಕ, ತಾಂತ್ರಿಕ ಅಂಶಗಳು ಹಾಸು ಹೊಕ್ಕಾಗಿವೆ. ಇಂಥ ತಾಂತ್ರಿಕಾಂಶಗಳು ವಿಜ್ಞಾನ ಕ್ಷೇತ್ರದ ಕತೆಗೆ ಸಂಬಂಧಿಸಿದಂತೆ ಬಂದರೆ ಕೇವಲ ಮಾಹಿತಿಯಾಗುವ, ನಿರೂಪಣೆಯ ಕೌಶಲವಿಲ್ಲದಿದ್ದರೆ ನೀರಸವೂ ಆಗುವ ಅಪಾಯವಿದೆ. ಇತಿಹಾಸದ ಗರ್ಭದಲ್ಲಿ ಅಡಗಿರಬಹುದಾದ ಸಂಗತಿಗಳನ್ನು ಸಂಶೋಧನಾತ್ಮಕ ದೃಷ್ಟಿಯಿಂದ ಹೊರತೆಗೆದು ವರ್ತಮಾನದೊಂದಿಗೆ ಮೇಳೈಸಿ ಪ್ರಸ್ತುತ ಪಡಿಸುವಲ್ಲಿ ಶ್ರೀ ಗಣೇಶಯ್ಯನವರ ಪ್ರತಿಭೆ ಕೆಲಸಮಾಡಿದೆ. ಕೃತಿಯ ಬಹುಪಾಲು ಯಶಸ್ಸು ಅಡಗಿರುವುದು ಇಲ್ಲಿಯೇ. ಕೃತಿಕಾರರ ಸೃಜನಶೀಲ ಮನಸ್ಸು ಕಾದಂಬರಿಯ ಉದ್ದಕ್ಕೂ ಕೆಲಸಮಾಡಿದೆ ಎಂಬುದಂತೂ ಸ್ಪಷ್ಟ. ನಾಡಿನುದ್ದಕ್ಕೂ ಹರಡಿರುವ ಕಲ್ಲು ಮಂಟಪಗಳು, ಶಿಲ್ಪ ಕಲಾ ಕೃತಿಗಳು, ದೇಗುಲಗಳು ಅದೆಷ್ಟು ವಿಸ್ಮಯಗಳನ್ನು ಹುದುಗಿಸಿಟ್ಟುಕೊಂಡಿವೆಯೋ ? ! ಇತಿಹಾಸ ಅವನ್ನೆಲ್ಲ ದಾಖಲಿಸಲು ಸಾಧ್ಯವೇ ? ಕಲ್ಪನಾಯುಕ್ತವೂ ತರ್ಕ ಸಮ್ಮತವೂ ಆದ ಇಂಥ ಶೋಧನಾತ್ಮಕ ಬರವಣಿಗೆಗಳಿಂದ ಆ ಎಲ್ಲ ಕಲ್ಲುಗಳೂ ಹೀಗೆ ಕತೆ ಹೇಳುವಂತಾದರೆ ಎಷ್ಟು ಚೆನ್ನ!

ಆರಂಭದಿಂದ ಕೊನೆಯ ಸಾಲಿನವರೆಗೂ ಓದುಗರ ಕುತೂಹಲವನ್ನು ಕೆಣಕುತ್ತಲೇ ಅನೇಕ ಸಂಗತಿಗಳನ್ನು ಹೇಳುತ್ತ ಕತೆಯನ್ನು ತರ್ಕ ಬದ್ಧವಾಗಿ ಬಿಚ್ಚಿಡುತ್ತಾ ಹೋಗುವ 'ಕನಕ ಮುಸುಕು' ಕನ್ನಡ ಕಾದಂಬರಿ ಕ್ಷೇತ್ರಕ್ಕೆ ಹೊಸರೀತಿಯ ಕಾಣಿಕೆ.

ಇಂದಿನ ಹೈಟೆಕ್ ಯುಗದಲ್ಲಿ ಕಾದಂಬರಿಗಳನ್ನು ಓದುವ ವರ್ಗವನ್ನು ಉಳಿಸಿಕೊಂಡು ಹೋಗುವ ಸವಾಲಿಗೆ ಉತ್ತರವೋ ಎಂಬಂತೆ ಬಂದಿರುವ ಈ ಕೃತಿ ಕನ್ನಡ ಸಾಹಿತ್ಯದಲ್ಲಿ ಒಂದು ಮೈಲುಗಲ್ಲಾದೀತೇ ? ನೋಡಬೇಕು. ❑

## "ಪುಸ್ತಕಮನೆ" ಉದ್ಘಾಟನೆ : ರಂ. ಶ್ರೀ. ಮುಗಳಿ ಅವರಿಂದ

ಶ್ರೀ ಹರಿಹರಪ್ರಿಯರು ಅನೇಕ ವರ್ಷಗಳಿಂದ ಬೇರೆಬೇರೆ ಲೇಖಕರ ಪುಸ್ತಕಗಳನ್ನು ಸಂಗ್ರಹಿಸಿ, ಅವುಗಳನ್ನು ಕ್ರಮಬದ್ಧ ರೀತಿಯಲ್ಲಿ ಜೋಡಿಸಿ, ತಮ್ಮ ಮನೆಯಲ್ಲಿಯೆ, ಹೆಮ್ಮೆಪಡುವಂಥ ರೀತಿಯಲ್ಲಿ ವ್ಯವಸ್ಥೆಗೊಳಿಸಿದ್ದಾರೆ. ವೈಯಕ್ತಿಕ ನೆಲೆಯಲ್ಲಿ ಬೇರೆಬೇರೆ ಮೂಲಗಳಿಂದ ಒಬ್ಬೊಬ್ಬ ಕನ್ನಡ ಲೇಖಕರ ಪುಸ್ತಕಗಳನ್ನು ಸಂಗ್ರಹಿಸಿ, ಅವುಗಳನ್ನು ಓರಣವಾಗಿ, ತಮ್ಮ ಇಕ್ಕಟ್ಟಾದ ಮನೆಯಲ್ಲಿಯೆ ಕ್ರಮಗೊಳಿಸಿ ಇಟ್ಟಿರುವುದು ಬಹಳ ಸ್ತುತ್ಯವಾದ ಕಾರ್ಯ. ಕರ್ನಾಟಕದಲ್ಲಿ ಈ ರೀತಿ ಯಾರೂ ಮಾಡಿಲ್ಲ. ಯಾವ ಪ್ರತಿಫಲದ ಇಚ್ಛೆಯಿಲ್ಲದೆ ಅವರು ಈ ಕಾರ್ಯವನ್ನು ಅನೇಕ ವರ್ಷಗಳಿಂದ ಮಾಡುತ್ತ ಬಂದಿದ್ದಾರೆ. ವಿಶೇಷವಾಗಿ, ಪ್ರಸಿದ್ಧ ಲೇಖಕರ ಎಲ್ಲ ಬರವಣಿಗೆಯನ್ನು ಈ ಸಂಗ್ರಹದಲ್ಲಿ ಕಾಣಬಹುದು. ಇದು ಬಹಳ ದೊಡ್ಡ ಕೆಲಸ. ಯಾಕೆಂದರೆ, ಅನೇಕ ಮಹತ್ವದ ಲೇಖಕರ ಎಲ್ಲಾ ಪುಸ್ತಕಗಳು ಒಂದೆಡೆಗೆ ನೋಡಲು ಕೂಡ ಸಿಗುವುದು ದುಸ್ತರ. ಕರ್ನಾಟಕದ ಪ್ರಸಿದ್ಧ ಗ್ರಂಥಾಲಯಗಳಲ್ಲೂ ಇವು ಎಲ್ಲಾ ದೊರೆಯುವುದಿಲ್ಲ. ಇವುಗಳನ್ನೆಲ್ಲ ಶ್ರೀ ಹರಿಹರಪ್ರಿಯರು ಸಂಗ್ರಹಿಸಿ, ಕ್ರಮಬದ್ಧವಾಗಿ ಇಟ್ಟಿರುವುದು ಒಂದು ಪವಾಡ ಸದೃಶ ಕಾರ್ಯವಾಗಿದೆ.

ಅನೇಕ ವರ್ಷಗಳಿಂದ ಅವರ ಪುಸ್ತಕ ಪ್ರೇಮವನ್ನು ನೋಡಿ ಅವರಿಗೆ ಬೆಂಬಲ ಕೊಡುತ್ತ ಬಂದ ನನಗೆ ತುಂಬ ಸಂತೋಷವಾಗಿದೆ. ಅವರ ಕಾರ್ಯಕ್ಕೆ ಪುಸ್ತಕ ಪ್ರೇಮಿಗಳಿಂದ ಮತ್ತು ಸಾರ್ವಜನಿಕರಿಂದ ಬೆಂಬಲ ಮತ್ತು ಸಹಾಯ ದೊರೆಯಲಿ ಎಂದು ಆಶಿಸುತ್ತೇನೆ. ಅವರಿಗೆ ಬೆಂಗಳೂರು ಮಹಾನಗರ ಪಾಲಿಕೆಯ ಅಧಿಕಾರಿಗಳು ಒಂದು ಯೋಗ್ಯವಾದ ನಿವೇಶನವನ್ನು ಉಚಿತವಾಗಿ ದೊರಕಿಸಿಕೊಟ್ಟು ಕಟ್ಟಡಕ್ಕೆ ಸಹಾಯ ನೀಡಿ, ಇನ್ನಷ್ಟು ಸುಮುಖವಾಗಿ ಈ ಕಾರ್ಯ ನಡೆಯುವಂತೆ ನೆರವು ನೀಡಬೇಕೆಂದು ನಾನು ಅವರಿಗೆ ವಿನಂತಿ ಮಾಡಿಕೊಳ್ಳುತ್ತೇನೆ.

ಕರ್ನಾಟಕದಲ್ಲಿ ಮಾತ್ರವಲ್ಲ, ನಮ್ಮ ದೇಶದ ಇತರ ರಾಜ್ಯಗಳಲ್ಲಿ, ನನಗೆ ತಿಳಿದ ಮಟ್ಟಿಗೆ, ವೈಯಕ್ತಿಕವಾದ ನೆಲೆಯಲ್ಲಿ ಈ ಬಗೆಯ ಸಾಹಿತ್ಯ ಪ್ರಚಾರ ಕಾರ್ಯ ನಡೆದಂತಿಲ್ಲ. ಇದಕ್ಕೆ ಸಾರ್ವಜನಿಕರು, ವಿಶೇಷವಾಗಿ ಕನ್ನಡ ಸಾಹಿತ್ಯ ಪ್ರೇಮಿಗಳು ಬೆಂಬಲ ನೀಡುವರೆಂದು ಆಶಿಸುತ್ತೇನೆ.

೧೧.೭.೧೯೮೨

ಈ ಪುಟದಲ್ಲಿ ಇನ್ನು ಮುಂದೆ "ಪುಸ್ತಕಮನೆ" ಗೆ ಭೇಟಿ ನೀಡಿದವರ ಅಭಿಪ್ರಾಯಗಳನ್ನು ಕೊಡಲಾಗುವುದು.

## ಸರ್ ಆಶುತೋಷ ಮುಖರ್ಜಿ ನೆನಪಿನ ಆಕರ ಗ್ರಂಥಾಲಯ
## ಪುಸ್ತಕಮನೆ

ಅಪ್ಪ ಅಜ್ಜ ಮುತ್ತಜ್ಜರಿಂದ ಮಕ್ಕಳು, ಮೊಮ್ಮಗಳ ಕಾಲಕ್ಕು ರಕ್ತಗತವಾಗಿ ಬಂದ ಪುಸ್ತಕ ಸಂಗ್ರಹ, ಓದುವ ಕಲೆಯನ್ನು ಬದುಕಾಗಿಯೂ ಸ್ವೀಕರಿಸಿದ ಫಲ 'ಪುಸ್ತಕಮನೆ'. ಕುಟುಂಬ ಅಸ್ತಿತ್ವಕ್ಕೇ ಸಂಚಕಾರ ಬಂದ ಅವೊಂದು ಸಂದರ್ಭದಲ್ಲಿ ಅನಿವಾರ್ಯವಾಗಿ ಪುಸ್ತಕಗಳನ್ನು ಮಾರಬೇಕಾಯಿತು. ಆದರೆ ಈ ಹನ್ನೆರಡು ವರ್ಷಗಳಲ್ಲಿ ಅದಕ್ಕಿಂತ ಮೂರುಪಟ್ಟು ಸಂಗ್ರಹಿಸಿ, ಸ್ವಂತ ಮನೆಯಲ್ಲಿಯೇ ಕುಟುಂಬವೇ ಸಾಲಸೋಲ ಮಾಡಿ ಹಂಚಿನಮನೆ ಕಟ್ಟಿ ಮತ್ತೆ 'ಪುಸ್ತಕಮನೆ' ಪ್ರಾರಂಭಿಸಲಾಗಿದೆ.

ಈ ಹಿಂದೆ ಭಾರತದಲ್ಲಿಯೇ ಎಪ್ಪತ್ತೆರಡು ಸಾವಿರ ಪುಸ್ತಕಗಳ ಖಾಸಗಿ ಗ್ರಂಥಾಲಯವನ್ನು ಹೊಂದಿದ್ದ ಪವಾಡಪುರುಷ ಕೊಲ್ಕತ್ತದ ಸರ್ ಆಶುತೋಷ ಮುಖರ್ಜಿ ಅವರ ನೆನಪಿಗೆ "ಪುಸ್ತಕಮನೆ" ಅರ್ಪಿಸಿ, ಕನ್ನಡ, ತೆಲುಗು, ಆಂಗ್ಲ ಭಾಷೆಗಳ ಅಧ್ಯಯನಾರ್ಹ ಪುಸ್ತಕಗಳನ್ನು ಸಂಗ್ರಹಿಸಲಾಗುತ್ತಿದೆ. ಹಾಗೂ ಸಾಂಸ್ಕೃತಿಕ ಮಹತ್ತ್ವಇರುವ ಪತ್ರಿಕೆಗಳನ್ನೂ ಕಲೆ ಹಾಕಲಾಗುತ್ತಿದೆ.

## ಶ್ರೀ ವಿದ್ಯಾರಣ್ಯ ಮನ್ನಣೆ

'ಪುಸ್ತಕಮನೆ'ಗೆ ಪೂರಕವಾಗಿ; ಕಾವ್ಯವಾಚನ, ವಿಚಾರಗೋಷ್ಠಿ ಪುಸ್ತಕ ಬಿಡುಗಡೆ, ಸಂಗೀತಕಾರ್ಯಕ್ರಮ, ಪ್ರತಿಭಾವಂತರು ಗಣ್ಯರೊಂದಿಗೆ ಮುಖಾಮುಖಿಯಂತಹ ಸಾಂಸ್ಕೃತಿಕ ಚಟುವಟಿಕೆಗಾಗಿ, ಕ್ರಮೇಣ ಪ್ರಶಸ್ತಿ ಬಹುಮಾನಗಳ ವಿತರಣೆಗಾಗಿ ಕನ್ನಡಿಗರ ಪುನಶ್ಚೇತನಕ್ಕೆ ಕಾರಣಪುರುಷರಾದ ಶ್ರೀ ವಿದ್ಯಾರಣ್ಯರ ಹೆಸರಿನಲ್ಲಿ 'ಶ್ರೀ ವಿದ್ಯಾರಣ್ಯ ಮನ್ನಣೆ' ವೇದಿಕೆಯನ್ನು ನಿರ್ಮಿಸಲಾಗಿದೆ.

ನಗರದಿಂದ ಮಾತ್ರವೇ ಅಲ್ಲ, ಜನಸಂದಣಿಯಿಂದಲೂ ದೂರವಿರುವ ನಿರಂಬಳವಾದ ವಾತಾವರಣದಲ್ಲಿ ನಾಡು, ನುಡಿ, ಸಂಸ್ಕೃತಿ ಕುರಿತು ಗಂಭೀರವಾಗಿ ಆಲೋಚಿಸಲು ಸಾಧ್ಯವಾಗುವ ಪ್ರಯತ್ನ ಇದಾಗಿದೆ.

**ನಿಮ್ಮ, ನಿಮ್ಮವರ ಆರ್ಥಿಕ, ನೈತಿಕ ನೆರವು ನಿರೀಕ್ಷಿಸುವ,**

ಪುಸ್ತಕಮನೆ ಹರಿಹರಪ್ರಿಯ